# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>**Volume 151** | ಬೆಂಗಳೂರು, ಗುರುವಾರ, ಜೂನ್ ೧೬, ೨೦೧೬ ( ಜ್ಯೇಷ್ಠ ೨೬, ಶಕ ವರ್ಷ ೧೯೩೮)<br>**Bengaluru, Thursday, June 16, 2016 ( Jyeishta 26, Shaka Varsha 1938)** | ಸಂಚಿಕೆ ೨೪<br>**Issue 24** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂ:ಕಾಇ 72 ಕಾಬಾನಿ 2015 ಬೆಂಗಳೂರು, ದಿನಾಂಕ: 12-02-2016.**

**ವಿಷಯ :** ಭಾರತೀಯ ಬಾಯ್ಲರ್ ರೆಗ್ಯುಲೇಷನ್ 1950ರಡಿಯಲ್ಲಿ ಪರಿವೀಕ್ಷಣೆ ಕೈಗೊಳ್ಳಲು ಮಾನ್ಯತೆ ಪಡೆದ ಸಂಸ್ಥೆಗಳ ಬಗ್ಗೆ.

ಸೆಂಟ್ರಲ್ ಬಾಯ್ಲರ್ಸ್ ಬೋರ್ಡ್, ನವದೆಹಲಿ ರವರು ಭಾರತೀಯ ಬಾಯ್ಲರ್ ರೆಗ್ಯುಲೇಷನ್ 1950ರ ಅಡಿಯಲ್ಲಿ Inspecting Authorities, Well know steel Makers, Founderies/ forging Units, Tube/Pipe Makers, Material Testing Laboratories and Remanent Life Assessment ಕೈಗೊಳ್ಳಲು ಮಾನ್ಯತೆ ಪಡೆದ ಸಂಸ್ಥೆಗಳ ಪಟ್ಟಿಯನ್ನು ಅವರ ಪತ್ರ ಸಂಖ್ಯೆ: 20/2009- Boilers ದಿನಾಂಕ: 21-10-2015ರಲ್ಲಿ ಪ್ರಕಟಿಸಿರುತ್ತಾರೆ. ಆ ಸಂಸ್ಥೆಗಳ ಪೈಕಿ ಈ ಕೆಳಕಂಡ ನಾಲ್ಕು ಸಂಸ್ಥೆಗಳನ್ನು ಭಾರತೀಯ ಬಾಯ್ಲರುಗಳ ಕಾಯ್ದೆ 1923ರ Section (2ccd)ರಡಿಯಲ್ಲಿ ಕರ್ನಾಟಕ ರಾಜ್ಯದಲ್ಲಿ ಬಾಯ್ಲರ್‌ಗಳ ಮತ್ತು ತಯಾರಿಕಾ ಹಂತದಲ್ಲಿರುವ ಬಾಯ್ಲರ್ ಕಾಂಪೋನೆಂಟ್‌ಗಳ ಪರಿವೀಕ್ಷಣೆ ಕೈಗೊಳ್ಳಲು ಮತ್ತು ಪ್ರಮಾಣ ಪತ್ರ ನೀಡಲು ಪರಿವೀಕ್ಷಣಾ ಪ್ರಾಧಿಕಾರಗಳೆಂದು (Inspecting Authorities) ಮಾನ್ಯತೆ ಮಾಡಲಾಗಿದೆ.

| | |
|---|---|
| 1 | M/s Lloyd's Register Asia<br>63-64, Kalpataru Square, 6th Floor,<br>Kondivita Lane, Off Andheri-kurla Road,<br>Mumbai-400 059. |
| 2 | M/s TUV India Private Limited,<br>(TUV Nord Group)<br>801, Raheja Plaza-1, L.B.S.Marg,<br>Ghatkopar(W) Mumbai-400 086 |
| 3 | M/s Bureau Veritas (India) Pvt Ltd.<br>Marwah Center, 6th Floor,<br>Opp Ansa Inds, Estate, K.Marwah Marg,<br>Off.Saki-Vihar Road, Andheri(East)<br>Mumbai-400 072 |
| 4 | M/s ABS Industrial Verification (India) Pvt. Ltd.,<br>10th Floor, Lakhani's Centrium, Sector 15, Plot No-27,<br>CBD Belapur (E), Navi Mumbai-400 614. |

**PR-185**
**SC-100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಂ.ಸಿದ್ಧರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.
(ಕಾರ್ಖಾನೆ ಮತ್ತು ಬಾಯ್ಲರುಗಳು)

## ಕಾನೂನು ಸಚಿವಾಲಯ

**ವಿಷಯ :** ಶ್ರೀ ಮೋಹನ್ ಶ್ರೀಪಾದ ಸಂಕೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ಬೆಂಗಳೂರಿನ ಕರ್ನಾಟಕ ಜುಡಿಷಿಯಲ್ ಅಕಾಡೆಮಿಯಲ್ಲಿನ ಸೀನಿಯರ್ ಫ್ಯಾಕಲ್ಟಿ ಮೆಂಬರ್ ಹುದ್ದೆಯಲ್ಲಿ ಮರುನೇಮಕ ಮಾಡಿರುವ ಕ್ರಮವನ್ನು ಅನುಸಮರ್ಥಿಸಿ ವೇತನ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:**

ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರಗಳ ಸಂಖ್ಯೆ: R.O.C. GOB(I) 1/2014, ದಿನಾಂಕ: 09–06–2015 ಮತ್ತು 27–01–2016.

**ಪ್ರಸ್ತಾವನೆ:**

ಈ ಮೇಲೆ ಓದಲಾದ ಪತ್ರಗಳಲ್ಲಿ, ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಶ್ರೀ ಮೋಹನ್ ಶ್ರೀಪಾದ ಸಂಕೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ಆದೇಶ ಸಂಖ್ಯೆ: GOB(I) 1/2014, ದಿನಾಂಕ: 26–11–2014 ರಲ್ಲಿ 2 (ಎರಡು) ವರ್ಷಗಳ ಅವಧಿಗೆ ಮರುನೇಮಕ ಮಾಡಿಕೊಂಡಿದ್ದು, ಸದರಿಯವರು ದಿನಾಂಕ: 01–01–2015ರಂದು ಕರ್ನಾಟಕ ಜುಡಿಷಿಯಲ್ ಅಕಾಡೆಮಿಯಲ್ಲಿನ Senior Faculty ಹುದ್ದೆಯನ್ನು ವಹಿಸಿಕೊಂಡಿರುವುದಾಗಿ ತಿಳಿಸಿ, ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ಕೈಗೊಂಡಿರುವ ಈ ಮರುನೇಮಕಾತಿಯ ಕ್ರಮವನ್ನು ಅನುಸಮರ್ಥಿಸುವಂತೆ (to ratify) ಹಾಗೂ ಅವರ ವೇತನವನ್ನು ನಿಗಧಿಪಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

**ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.**

**ಸರ್ಕಾರದ ಆದೇಶ ಸಂಖ್ಯೆ: ಲಾ 66 ಎಲ್‌ಸಿಇ 2015, ಬೆಂಗಳೂರು, ದಿನಾಂಕ: 29–02–2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 15(1)(ಎ) ರನ್ವಯ ಕರ್ನಾಟಕ ಜುಡಿಷಿಯಲ್ ಅಕಾಡೆಮಿಯಲ್ಲಿನ Senior Faculty Member ಖಾಲಿ ಹುದ್ದೆಗೆ ಶ್ರೀ ಮೋಹನ್ ಶ್ರೀಪಾದ ಸಂಕೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ಆದೇಶ ಸಂಖ್ಯೆ: GOB(I) 1/2014, ದಿನಾಂಕ: 26–11–2014ರಲ್ಲಿ 2 (ಎರಡು) ವರ್ಷಗಳ ಅವಧಿಗೆ ಮರುನೇಮಕ ಮಾಡಿಕೊಂಡಿರುವ ಕ್ರಮವನ್ನು ಸರ್ಕಾರವು ಅನುಸಮರ್ಥಿಸಿದೆ.

2. ಶ್ರೀ ಮೋಹನ್ ಶ್ರೀಪಾದ ಸಂಕೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಗುತ್ತಿಗೆ ಆಧಾರದ ನೇಮಕಾತಿಗೆ ಸಂಬಂಧಿಸಿದಂತೆ ಸೇವಾ ಷರತ್ತುಗಳ ಕುರಿತು ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು.

**PR-186**

**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಉಮೇಶ**

ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ–1),

ಕಾನೂನು ಇಲಾಖೆ.

## COMMERCE & INDUSTRIES SECRETARIAT

**Sub :** Transfer of Shares of Vijayanagar Steel Ltd., held by Officers of Government of Karnataka – reg.

**Read :** Letter of Managing Director, Vijayanagar Steel Ltd., No. VSL/MD/CI:SPI:154/2015/16, Dated: 26-12-2015.

**PREAMBLE:**

The Managing Director, Vijayanagar Steel Ltd., vide his letter read above has stated that the following officers of Government of Karnataka are holding one share each with a face value Rs. 1000/- of Vijayanagar Steel Ltd.

| Sl. No. | No.of Shares | Shares Amount Rs. | Share Holder |
|---|---|---|---|
| 01 | 01 | 1000/- | Sri Naveen Raj Singh, IAS, Managing Director, KSIIDC & Chairman, VNSL |
| 02 | 01 | 1000/- | Sri Gaurav Gupta, IAS, Commissioner for ID & Director Industries & Commerce |
| 03 | 01 | 1000/- | Sri Anil A Uppin, Managing Director, VNVL & MD, Additional Director (Viswa) I&C Department |
| 04 | 01 | 1000/- | Sri G.S. Kulkarni, Director (Technical Cell), C&I Department |
| 05 | 01 | 1000/- | Smt S. Umadevi, Desk Officer (Technical Cell), C&I Department |
| 06 | 01 | 1000/- | Sri M.D. Ravindranath, Additional Secretary, C&I Department |
| **Total** | **06** | **6000/-** | |

Has further stated that the officials at 4 & 6 are retired and it is necessary to have the shares transferred to the officers, presently holding positions in Commerce and Industries Department.

Hence the following Order.

**GOVERNMENT ORDER NO: CI 13 SPI 2016, BENGALURU, DATED: 21-01-2016**

The Government is pleased to accord approval to the transfer of the shares of Vijayanagar Steel Ltd., in favour of the following officers of the Commerce and Industries Department.

| Sl. No | Share Holder | Official Presently holding the post |
|---|---|---|
| 01 | Sri G.S. Kulkarni, Director (Technical Cell), C&I Department | Sri. R. Ramesh, Director (Technical Cell), C&I Department |
| 02 | Sri M.D. Ravidranath, Additional Secretary, C&I Department | Sri Jaganmatha, Additional Secretary, C&I Department |

By Order and in the name of the Governor of Karnataka,

**S. UMADEVI**

Desk Officer (Technical Cell),

Commerce & Industries Department.

**PR-187**
**SC-25**

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ವಿ.ದೇಮಯ್ಯ, ಜಿಲ್ಲಾ ವ್ಯವಸ್ಥಾಪಕರು, ಡಾ॥ ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ, ದಾವಣಗೆರೆ ಜಿಲ್ಲೆ ಇವರ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ಬಗ್ಗೆ.

**ಓದಲಾಗಿದೆ :**

1) ಪ್ರಭಾರಿ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್ / ಐಎನ್‌ವಿ(ಜಿ)/ಸಿಟಿಎ/ಸಿಆರ್–3/2015, ದಾವಣಗೆರೆ, ದಿನಾಂಕ: 22–04–2015.
2) ವ್ಯವಸ್ಥಾಪಕ ನಿರ್ದೇಶಕರು, ಡಾ॥ ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ರವರ ಪತ್ರ ಸಂಖ್ಯೆ: ಡಾ:ಬಿ.ಆರ್.ಅಂಅನಿ/ಸಿ–ಆ/ಲೋಕಾಟ್ರ್ಯಾಪ್/ಪ್ರತಿ/2014–15, ದಿನಾಂಕ: 20–04–2015.
3) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ರವರ ಆದೇಶ ಸಂಖ್ಯೆ:ಸಕನಿ/ಸಿಬ್ಬಂದಿ–10/ಸಿಆರ್–2/2015–15, ದಿನಾಂಕ: 15–05–15.
4) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿಎಎಲ್–8/ಮೊ.ನಂ.03/15, ದಾವಣಗೆರೆ, ದಿನಾಂಕ: 02–12–2015.
5) ಅಧಿಕೃತ ಜ್ಞಾಪನಾ ಸಂಖ್ಯೆ: ಸಿಆಸುಇ 03 ಸೇಇವಿ 2000, ದಿನಾಂಕ:24–03–2001 ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 31 ಸೇಇವಿ 2001 ದಿನಾಂಕ: 24–08–2001

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 22–04–2015 ರ ಪತ್ರದಲ್ಲಿ ಪ್ರಭಾರಿ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ವ್ಯವಸ್ಥಾಪಕರ ನಿರ್ದೇಶಕರು, ಡಾ॥ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ ಇವರಿಗೆ ಪತ್ರ ಬರೆದು ಫಿರ್ಯಾದಿಯಾದ ಶ್ರೀ ಎಸ್.ಆಂಜನೇಯ ಬಿನ್ ಸಿದ್ದಪ್ಪ ಇವರು ದಾವಣಗೆರೆ ಲೋಕಾಯುಕ್ತ ಠಾಣೆಗೆ ದಿನಾಂಕ: 23–03–2015 ರಂದು ಹಾಜರಾಗಿ ತಮ್ಮ ಅಣ್ಣನಾದ ದೊಡ್ಡ ಈರಪ್ಪರವರಿಗೆ ಡಾ॥ ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದ ಸ್ವಯಂ ಉದ್ಯೋಗ ಯೋಜನೆಯಡಿಯಲ್ಲಿ ಹೈನುಗಾರಿಗೆ ಸಂಬಂಧ ಸಾಲ ಸಹಾಯಧನ ಸೌಲಭ್ಯಕ್ಕಾಗಿ ₹.70,000/- ಗಳಷ್ಟು ಸಾಲ ಮಂಜೂರಾಗಿದ್ದು, ಸದರಿ ಸಾಲವನ್ನು ಮಂಜೂರು ಮಾಡಲು ನಿಗಮದ ಜಿಲ್ಲಾ ವ್ಯವಸ್ಥಾಪಕರಾದ ಆರೋಪಿ–1 ಶ್ರಿ ದೇಮಯ್ಯ ಇವರು ₹. 2,000/– ಲಂಚದ ಹಣಕ್ಕೆ, ಆರೋಪಿ–2 ಶ್ರೀಮತಿ ರತ್ನಮ್ಮ, ಎಸ್.ಡಿ.ಎ ರವರು ₹.500/– ಲಂಚದ ಹಣಕ್ಕೆ ಹಾಗೂ ಆರೋಪಿ–3 ಶ್ರೀಮತಿ ಹೇಮಾವತಿ, ಸೂಪರಿಂಟೆಂಡೆಂಟ್ ರವರು ₹.500/– ಲಂಚದ ಹಣಕ್ಕೆ ಬೇಡಿಕೆ ಇಟ್ಟಿದ್ದು, ಫಿರ್ಯಾದಿಗೆ ಲಂಚದ ಹಣ ಕೊಡಲು ಇಷ್ಟವಿಲ್ಲದ್ದರಿಂದ ದಾವಣಗೆರೆ ಲೋಕಾಯುಕ್ತ ಠಾಣೆಗೆ ಬಂದು ದೂರು ನೀಡಿದ್ದು, ಮೊಕದ್ದಮೆ ಸಂಖ್ಯೆ: 3/2015 ನ್ನು ದಾಖಲಿಸಿ ಕಲಂ–7.ಪಿ.ಸಿ. ಕಾಯ್ದೆ 1988 ರಡಿಯಲ್ಲಿ ಪ್ರಕರಣ ದಾಖಲಿಸಿ ತನಿಖೆಯನ್ನು ಕೈಗೊಂಡಿದ್ದು, ಲೋಕಾಯುಕ್ತರು ನಡೆಸಿರುವ ಟ್ರ್ಯಾಪ್‌ನಲ್ಲಿ ಮೇಲ್ಕಂಡ ಆರೋಪಿತರು ಸಿಲುಕಿರುತ್ತಾರೆ. ಆದ್ದರಿಂದ, ಆರೋಪಿತರುಗಳಾದ (1) ಶ್ರೀ ದೇಮಯ್ಯ, ಜಿಲ್ಲಾ ವ್ಯವಸ್ಥಾಪಕರು, (2) ಶ್ರೀಮತಿ ರತ್ನಮ್ಮ, ಎಸ್.ಡಿ.ಎ., (3) ಶ್ರೀ ಜಗದೀಶ್, ವಾಹನ ಚಾಲಕರು, ಡಾ॥ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ ಮತ್ತು (4) ಶ್ರೀ ಹನುಮಂತಪ್ಪ, ಖಾಸಗಿ ವ್ಯಕ್ತಿ ಇವರುಗಳ ಮೇಲಿನ ಭ್ರಷ್ಟಾಚಾರದ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಸದರಿ ಆರೋಪಿತರುಗಳನ್ನು ಅಮಾನತುಗೊಳಿಸುವಂತೆ ಹಾಗೂ ಸದರಿ ಅಧಿಕಾರಿ/ನೌಕರರ ಸ್ಥಳ (ಲೀನ್) ಬದಲಾಯಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 27–03–2015ರ ಪತ್ರದಲ್ಲಿ ವ್ಯವಸ್ಥಾಪಕರ ನಿರ್ದೇಶಕರು, ಡಾ॥ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ, ದಾವಣಗೆರೆ ಇವರು ಶ್ರೀ ವಿ.ದೇಮಯ್ಯ ಇವರು ಮೂಲತಃ ಸಮಾಜ ಕಲ್ಯಾಣ ಇಲಾಖೆಯವರಾಗಿದ್ದು, ನಿಯೋಜನೆ ಮೇಲೆ ನಿಗಮದಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರಯುಕ್ತ ಕರ್ನಾಟಕ ಸರ್ಕಾರಿ ಸೇವಾ ನಿಯಮಗಳನ್ವಯ ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ: 15–15–2015ರ ಆಯುಕ್ತರ ಆದೇಶದಲ್ಲಿ ವ್ಯವಸ್ಥಾಪಕರ ನಿರ್ದೇಶಕರು, ಡಾ||ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ, ದಾವಣಗೆರೆ ಜಿಲ್ಲೆ ರವರ ಮೇಲ್ಕಂಡ ಪತ್ರವನ್ನು ಪರಿಶೀಲಿಸಿ ಶ್ರೀ ವಿ.ದೇಮಯ್ಯ (ಮೂಲತಃ ಸಮಾಜ ಕಲ್ಯಾಣ ಇಲಾಖೆ), ಜಿಲ್ಲಾ ವ್ಯವಸ್ಥಾಪಕರು, ಡಾ||ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ, ದಾವಣಗೆರೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ: 02–12–2015ರ ಪತ್ರದಲ್ಲಿ (1) ಶ್ರೀ ದೇಮಯ್ಯ, ಜಿಲ್ಲಾ ವ್ಯವಸ್ಥಾಪಕರು, ಡಾ||ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ, ದಾವಣಗೆರೆ. (2) ಶ್ರೀಮತಿ ರತ್ನಮ್ಮ, ಕೋಂ ಲೇಟ್ ಭೋಜರಾಜ, ದ್ವಿ.ದ.ಸ. ಡಾ||ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ, ನಿಯಮಿತ, ದಾವಣಗೆರೆ, (3) ಶ್ರೀ ಜಗದೀಶ ಜಾನಪ್ಪ ಕಡೇಮನೆ, ತಂದೆ ಜಾನಪ್ಪ, ವಾಹನ ಚಾಲಕರು, ಡಾ||ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ, ದಾವಣಗೆರೆ ಮತ್ತು (4) ಶ್ರೀ ಹನುಮಂತಪ್ಪ ತಂದೆ ಶಿವಪ್ಪ, ನಿಟ್ಟುವಳ್ಳಿ, ದಾವಣಗೆರೆ ಇವರುಗಳು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ ಕಲಂ 7, 8, 13(1)(ಡಿ) ರೆ/ವಿ 13(2) ಲಂಚ ನಿರೋಧ ಕಾಯ್ದೆ 1988 ರ ಅಡಿಯಲ್ಲಿ ಎಸಗಿದ್ದ ಶಿಕ್ಷಾರ್ಹ ಅಪರಾಧಗಳು ಸಾಬೀತಾಗಿದ್ದು, ಸದರಿ ಆರೋಪಿತರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅರ್ಹರಿದ್ದು, ಅಭಿಯೋಜನೆಗೆ ಒಳಪಡಿಸಲು ಸಕ್ಷಮ ಪ್ರಾಧಿಕಾರ ಅರ್ಥಾತ್ ಆರೋಪಿತರನ್ನು ತನ್ನ ಹುದ್ದೆಯಿಂದ ತೆಗೆದು ಹಾಕುವ ಅಧಿಕಾರವುಳ್ಳ ಪ್ರಾಧಿಕಾರದ ಪೂರ್ವಾನುಮತಿ ಅತ್ಯಗತ್ಯವಾಗಿರುತ್ತದೆ. ಆದ್ದರಿಂದ ಪ್ರಸ್ತುತ ಪ್ರಕರಣದಲ್ಲಿ ಆರೋಪಿತರಾದ ಶ್ರೀ ದೇಮಯ್ಯ ಇವರು ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 ಕಲಂ 19(1)(ಸಿ) ರನ್ವಯ ಅಭಿಯೋಜನಾ ಮಂಜೂರಾತಿ ಆದೇಶವನ್ನು ಹೊರಡಿಸಬೇಕೆಂದು ಅಂತಿಮ ತನಿಖಾ ವರದಿ ಹಾಗೂ ಸಂಬಂಧಪಟ್ಟ ದಾಖಲೆಗಳೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ತನಿಖಾಧಿಕಾರಿಗಳ ಅಂತಿಮ ವರದಿಯ ಪ್ರಕಾರ ಆಪಾದಿತ ಸರ್ಕಾರಿ ಅಧಿಕಾರಿಯ ವಿರುದ್ಧ ದಾಖಲಾಗಿರುವ ಪ್ರಕರಣದಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆಯಲ್ಲಿ ಆಪಾದನೆ ಸಾಬೀತಾಗಿರುತ್ತದೆ. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 46 ಸೇಇವಿ 2008, ದಿನಾಂಕ: 11–12–2010 ರಂತೆ ಕರ್ನಾಟಕ ನಾಗರೀಕ ಸೇವೆಗಳು ಸಮೂಹ 'ಬಿ' ಹುದ್ದೆಗಳಿಗೆ ಸರ್ಕಾರದಿಂದ ನೇಮಕಗೊಂಡವರಿಗೆ ಕರ್ನಾಟಕ ಸಿವಿಲ್ ಸೇವಾ (ಸಿಸಿಎ) ನಿಯಮಗಳು 1957 ರ ನಿಯಮ 8 (V) ರಿಂದ (Viii) ರಲ್ಲಿ ನಿರ್ದಿಷ್ಟಪಡಿಸಿದ ದಂಡನೆಯನ್ನು ವಿಧಿಸಲು ಸರ್ಕಾರವು ಶಿಸ್ತು ಪ್ರಾಧಿಕಾರವಾಗಿ ಮುಂದುವರೆಯತಕ್ಕದ್ದು ಎಂದು ಆದೇಶಿಸಲಾಗಿದೆ. ಶ್ರೀ ವಿ.ದೇಮಯ್ಯ ಇವರು 'ಬಿ' ಗ್ರೂಪ್ ಅಧಿಕಾರಿಯಾಗಿರುವುದರಿಂದ ಸರ್ಕಾರದ ಹಂತದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿ.ಟಿ.ಎಲ್–8/ಮೊ.ನಂ.03/15/ದಾವಣಗೆರೆ, ದಿನಾಂಕ: 02–12–2015 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

| ಕ್ರ.ಸಂ. | ಕಾಗದ ಪತ್ರಗಳ ವಿವರ |
|---|---|
| 1 | ಶ್ರೀ ಕೆ.ಚಂದ್ರಪ್ಪ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ದಾವಣಗೆರೆ ಇವರು ದಾವಣಗೆರೆ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುವ ಮೊ.ಸಂ.3/2015 ರ ಸಂಬಂಧ ಸಲ್ಲಿಸಿರುವ ಅಂತಿಮ ವರದಿ. |
| 2 | ಫಿರ್ಯಾದುದಾರರಾದ ಶ್ರೀ ಆಂಜನೇಯ ಇವರು ದಿನಾಂಕ: 24–03–2015 ರಂದು ನೀಡಿರುವ ದೂರು ಪ್ರತಿ. |
| 3 | ಪ್ರಕರಣದಲ್ಲಿ ಸಾಕ್ಷಿಗಳಾಗಿ ಭಾಗವಹಿಸಲು ಸರ್ಕಾರಿ ನೌಕರರನ್ನು ನಿಯೋಜಿಸುವಂತೆ ಕೋರಿ ದಾವಣಗೆರೆ ಮಹಾನಗರ ಪಾಲಿಕೆ ರವರಿಗೆ ಬರೆದ ದಿನಾಂಕ: 23–03–2015 ರ ಪತ್ರ. |
| 4 | ವಹಿಸುವಿಕೆ ಪಂಚನಾಮೆ. |
| 5 | ಟ್ರ್ಯಾಪ್ ಪಂಚನಾಮೆ |
| 6 | ದಿನಾಂಕ: 24–03–2013 ರಂದು ಘನ ನ್ಯಾಯಾಲಯಕ್ಕೆ ಕೊಟ್ಟಿರುವ ವರದಿ. |
| 7 | ತನಿಖಾಧಿಕಾರಿಯವರು ತಯಾರಿಸಿದ ಕೃತ್ಯ ನಡೆದ ಸ್ಥಳದ ಕಚ್ಚಾ ನಕಾಶೆ. |
| 8 | ಶ್ರೀಮತಿ ಎಂ.ಬಿ.ಸಾವಿತ್ರಿ, ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರು ನೀಡಿರುವ ಶ್ರೀ ದೇಮಯ್ಯ ಇವರ ಸೇವಾ ವಿವರ. |
| 9 | ತನಿಖೆಯಲ್ಲಿ ಸಂಗ್ರಹಿಸಿದ ದೃಢೀಕೃತ ದಾಖಲೆಗಳು |
| 10 | 2014–15 ನೇ ಸಾಲಿನ ಎಸ್.ಸಿ.ಪಿ. ಯೋಜನೆಯಡಿಯಲ್ಲಿ ಶ್ರೀ ದೊಡ್ಡ ಈರಪ್ಪ ಬಿನ್ ಸಿದ್ದಪ್ಪ ಇವರು ಹೈನುಗಾರಿಕೆ ಉದೇಶಕ್ಕಾಗಿ ಮಾಡಿಕೊಂಡ ಅರ್ಜಿಯ ಕಡತದ ಮುಖಪುಟ ಇತ್ಯಾದಿ. |
| 11 | ಆರೋಪಿತರ ಸ್ವರಕ್ಷಣಾ ಹೇಳಿಕೆಗಳು |
| 12 | ಟ್ರ್ಯಾಪ್ ಪೂರ್ವ ಮತ್ತು ಟ್ರ್ಯಾಪ್ ಸಮಯದಲ್ಲಿ ತೆಗೆದಂತಹ ಫೋಟೋಗಳ ಪ್ರತಿಗಳು. |
| 13 | ರಸಾಯನಿಕ ಪರೀಕ್ಷಾ ತಜ್ಞರ ವರದಿ |
| 14 | ತನಿಖೆಯಲ್ಲಿ ಪಡೆದುಕೊಂಡ ಸಾಕ್ಷಿದಾರರ ಹೇಳಿಕೆಗಳು |
| 15 | ಪಿ.ಡಬ್ಲ್ಯುಡಿ. ಇಲಾಖೆಯಿಂದ ನೀಡಿರುವ ಕೃತ್ಯ ನಡೆದ ಸ್ಥಳದ ನಕಾಶೆ. |
| 16 | ಆಪಾದಿತ ಸರ್ಕಾರಿ ಅಧಿಕಾರಿಯವರ ಸೇವಾ ವಿವರ |
| 17 | ಅಂತಿಮ ವರದಿಯಲ್ಲಿರುವ ಇತರೆ ದಾಖಲೆಗಳು |

| ಕ್ರ.ಸಂ. | | ಕಾಗದ ಪತ್ರಗಳ ವಿವರ |
|---|---|---|
| 18 | **ಸಾಕ್ಷಿದಾರರ ಹೇಳಿಕೆಗಳು:–** | |
| | 1 | ಶ್ರೀ ಆಂಜನೇಯ, ಫಿರ್ಯಾದಿ ಇವರ ಹೇಳಿಕೆ ದಿನಾಂಕ: 27–03–2015. |
| | 2 | ಶ್ರೀ ಶಿವಾಜಿರಾವ್ ಪಂಚ–1 ಇವರ ಹೇಳಿಕೆ |
| | 3 | ಶ್ರೀಮತಿ ಸುನಂದಮ್ಮ, ಪಂಚ–2 ಇವರ ಹೇಳಿಕೆ |
| | 4 | ಶ್ರೀ ದೊಡ್ಡ ಈರಣ್ಣ ಇವರ ಹೇಳಿಕೆ ದಿನಾಂಕ: 27–03–2015 |
| | 5 | ಶ್ರೀಮತಿ ಪಿ ಪಾರ್ವತಿಬಾಯಿ ಇವರ ಹೇಳಿಕೆ |
| | 6 | ಶ್ರೀ.ಎಂ.ಪಿ ಪರಮೇಶ್ವರಪ್ಪ ಇವರ ಹೇಳಿಕೆ. |
| | 7 | ಶ್ರೀಮತಿ ಜಯ್ಯಮ್ಮ ಇವರ ಹೇಳಿಕೆ |
| | 8 | ಶ್ರೀ ಮನೋಹರ.ಬಿ.ಜಿ ಮತ್ತು ಶ್ರೀ ಎಂ.ಎಸ್.ಬಸಪ್ಪ, ಇವರ ಹೇಳಿಕೆ ಹಾಗೂ ಶ್ರೀ.ಜಿ.ಕೆ.ವೆಂಕಟೇಶರೆಡ್ಡಿ ಪೊಲೀಸ್ ಮುಖ್ಯ ಪೇದೆ, ಮತ್ತು ಶ್ರೀ.ಕೆ.ಆರ್.ಪಂಪಾಪತಿ ಇವರ ಹೇಳಿಕೆ ಮತ್ತು ಮುಂದುವರೆದ ಇವರ ಹೇಳಿಕೆ |
| | 9 | ಶ್ರೀ.. ಶ್ರೀ.ಎಚ್.ಟಿ.ಸುರೇಶ್ ಮುಖ್ಯಪೇದೆ, ಶ್ರೀ ಜಯಮಂಜುನಾಥ ಪೊಲೀಸ್ ಪೇದೆ, ಶ್ರೀ ಮಲ್ಲಿಕಾರ್ಜುನ ಪೊಲೀಸ್ ಪೇದೆ, ಜಗದೀಶ್.ಪಿ.ಬಿ ಪೊಲೀಸ್ ಪೇದೆ, ಶ್ರೀಮತಿ ಹೊನ್ನಮ್ಮ ಮಹಿಳಾ ಪೇದೆ, ನಂಬರ್ 653, ಶ್ರೀಮತಿ ನಿರ್ಮಲಾ ಮಹಿಳಾ ಮುಖ್ಯಪೇದೆ ನಂಬರ್ 202 ಮತ್ತು ಶ್ರೀಮತಿ ಹೊನ್ನಮ್ಮ ಮಹಿಳಾ ಪೇದೆ, ಇವರ ಹೇಳಿಕೆಗಳು ಮತ್ತು ರಹದಾರಿ ಪತ್ರ |
| | 10 | ಶ್ರೀ ಟ್ರ್ಯಾಪ್ ಪಂಚನಾಮಿಯಲ್ಲಿನ ನ್ಯೂನತೆಯ ಬಗ್ಗೆ ಘನನ್ಯಾಯಾಲಯಕ್ಕೆ ಸಲ್ಲಿಸಿದ ವರದಿ ದಿನಾಂಕ: 04–04–2015ರ ಪ್ರತಿ. |

ಮೇಲಿನ ಕ್ರಮಸಂಖ್ಯೆ (5)ರಲ್ಲಿ ಓದಲಾದ ಸರ್ಕಾರದ ಅಧಿಕೃತ ಜ್ಞಾಪನ ದಿನಾಂಕ: 24–03–2001 ಮತ್ತು ಸುತ್ತೋಲೆ ದಿನಾಂಕ: 24–08–2001 ರನ್ವಯ ಪರಿಶೀಲಿಸಲಾಗಿ, ಆಪಾದಿತರು ಫಿರ್ಯಾದಿಯವರ ದೂರಿನಂತೆ 2014ನೇ ಸಾಲಿನಲ್ಲಿ ಡಾ||ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದ ಸ್ವಯಂ ಉದ್ಯೋಗ ಯೋಜನೆಯಡಿಯಲ್ಲಿ ಹೈನುಗಾರಿಕೆ (ಆಡು ಸಾಕಾಣಿಕೆ) ಸಂಬಂಧ ಸಾಲ ಸಹಾಯಧನ ಸೌಲಭ್ಯದ ಚೆಕ್ ನೀಡಲು ಫಿರ್ಯಾದಿಯಿಂದ ಲಂಚಕ್ಕೆ ಒತ್ತಾಯಿಸಿದ್ದು ಲಂಚದ ಮೊತ್ತ ರೂ.2000/– ಗಳನ್ನು ಪಡೆದಿರುವುದು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2) ರ ಅಡಿಯಲ್ಲಿ ಅಪರಾಧವಾಗಿರುವುದಕ್ಕೆ ಸಾಕಷ್ಟು ಸಾಕ್ಷಿ ಪುರಾವೆಗಳು ಇರುವುದಾಗಿ ಸಲ್ಲಿಸಿರುವ ತನಿಖಾಧಿಕಾರಿಯವರ ಅಂತಿಮ ವರದಿಯಿಂದ ವ್ಯಕ್ತವಾಗುತ್ತದೆ.

ಆದ್ದರಿಂದ, ಆಪಾದಿತ ಸರ್ಕಾರಿ ಅಧಿಕಾರಿಯವರನ್ನು ಅಭಿಯೋಜನೆಗೆ ಒಳಪಡಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 220 ಪಕಸೇ 2015, ಬೆಂಗಳೂರು, ದಿನಾಂಕ: 30–01–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ವಿ.ದೇಮಯ್ಯ, (ಮೂಲತಃ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ), ಹಿಂದಿನ ಜಿಲ್ಲಾ ವ್ಯವಸ್ಥಾಪಕರು, ಡಾ||ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ, ದಾವಣಗೆರೆ ಇವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 ರ ಕಲಂ–7, 13(1)(ಡಿ) ಜೊತೆಗೆ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಭ್ರಷ್ಟಾಚಾರ ನಿರ್ಮೂಲನಾ ಅಧಿನಿಯಮ 1988ರ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಅಭಿಯೋಜನಾ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**PR-188**
**SC-25**

**ಪಿ.ಎನ್.ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ–1(ಪ್ರ),
ಸಮಾಜ ಕಲ್ಯಾಣ ಇಲಾಖೆ.

## LAW SECRETARIAT

**Sub:** Establishment of three more Addl. City Civil and Sessions courts in Bengaluru, for trial of cases under the Prevention of Corruption Act.

**READ:** **i)** Government Letter No. LAW 04 LCE 2013, dated: 23-06-2014.

**ii)** Letter No. GOB.II 215/2011, dated: 03-10-2015 received from the Registrar General, High Court of Karnataka, Bengaluru.

**PREAMBLE:**

The Registrar General, High Court of Karnataka, Bengaluru, as per the request of the Government has submitted a proposal vide letter read at (ii) above to establish following three more Addl. Courts at Bengaluru for trial of cases under the Prevention of Corruption Act, along with the post of Presiding Officer and necessary non-gazetted staff:-

1. LXXVI Additional City Civil and Session Court, Bengaluru.
2. LXXVII Additional City Civil and Session Court, Bengaluru.
3. LXXVIII Additional City Civil and Session Court, Bengaluru.

He has also requested to accord sanction for purchase of stationary articles of furniture, typewriters, Xerox machine, stationary, computer, fax machine etc., for the use of the above said courts and also to issue directions to the Director of Printing, Stationary &

Publications, Government Press, Bengaluru, for supply of requisite quota of stationary articles, forms, seals, Registers and Karnataka Gazette, for the use of the above courts.

He has also requested to issue a notification under the following sections:-

a. Sub-Section-(1) of Section 3 of the Prevention of Corruption Act, 1988 (Central Act 49 of 1988).
b. Sub-Section (2) of Section 3 of the Bengaluru City Civil Courts Act, 1979 (Karnataka Act 13 of 1980).

The proposal is examined and hence the following order.

**GOVERNMENT ORDER NO.LAW 04 LCE 2013, BENGALURU, DATED: 10-02-2016**

Government are pleased to accord sanction for establishment of following three more Addl. Courts at Bengaluru for trial of cases under the Prevention of Corruption Act, along with the post of Presiding Officer and necessary non-gazetted staff:-

1. LXXVI Additional City Civil and Session Court, Bengaluru.
2. LXXVII Additional City Civil and Session Court, Bengaluru.
3. LXXVIII Additional City Civil and Session Court, Bengaluru.

2. The staffing pattern for each of these three Courts shall be as under:-

| Sl. No. | Name of the Post | No. of Posts |
|---|---|---|
| 1. | District Judge | 1 |
| 2. | Judgment Writer | 1 |
| 3. | First Division Assistant | 1 |
| 4. | Typist | 1 |
| 5. | Attender | 1 |
| 6. | Peons | 2 |
| | **Total** | **7** |

3.Permission is also accorded for purchase of stationary articles of furniture, typewriters, Xerox machine, Stationary, Computer, fax machine etc., for the use of the above said courts. The Director of Printing, Stationary & Publications, Government Press, Bengaluru, shall supply requisite quota of stationary articles, forms, seals, Registers and Karnataka Gazette, for the use of the above said courts.

4. The Expenditure towards establishment of these courts shall be debited to HOA "2014-00-105-0-01-CIVIL & SESSIONS COURTS".

5. This order is issued with the concurrence of Finance Department vide its U.O.Note No. FD/39/Exp. 10/2016, dated: 08-02-2016.

By Order and in the name of the Governor of Karnataka,

**K.NATARAJAN**

Principal Secretary to Government,

Law Department.

**PR-189**
**SC-100**

## ಶಿಕ್ಷಣ ಸಚಿವಾಲಯ

**ವಿಷಯ :** 2016–17ನೇ ಸಾಲಿನಲ್ಲಿ ವೃತ್ತಿಪರ ಶಿಕ್ಷಣ ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ರಚಿಸಿರುವ ಶುಲ್ಕ ನಿಯಂತ್ರಣ ಸಮಿತಿಯ ಸದಸ್ಯರುಗಳ ಸೇವೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಇಡಿ 146 ಟಿಇಸಿ 2014 ದಿನಾಂಕ: 12–06–2015.

2) ಜಸ್ಟೀಸ್ ಆರ್.ಗುರುರಾಜನ್, ಅಧ್ಯಕ್ಷರು, ಇವರ ಪತ್ರ ದಿ: 12–06–2015

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ವೃತ್ತಿಪರ ಶಿಕ್ಷಣ ಸಂಸ್ಥೆಗಳು (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗಧಿ) 2006ರ ಅಧಿನಿಯಮದಡಿ ಕಲ್ಪಿಸಲಾಗಿರುವ ಅವಕಾಶಗಳಂತೆ 2015–16ನೇ ಸಾಲಿಗೆ ವೃತ್ತಿಪರ ಶಿಕ್ಷಣ ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ರಚಿಸಿರುವ ಶುಲ್ಕ ನಿಯಂತ್ರಣ ಸಮಿತಿಯ ಸದಸ್ಯರುಗಳನ್ನಾಗಿ ಸಮಿತಿಯ ಅಧ್ಯಕ್ಷರಿಂದ ನಾಮನಿರ್ದೇಶನಗೊಂಡ ಶ್ರೀ.ಕೆ.ವಿ.ರಾಧಕೃಷ್ಣನ್ ಮತ್ತು ಡಾ॥ಎಸ್.ಬಿಸಲಯ್ಯ ಇವರುಗಳನ್ನು ಸದರಿ ಸಮಿತಿಯ ಸದಸ್ಯರುಗಳನ್ನಾಗಿ ದಿನಾಂಕ: 05–06–2015 ರಿಂದ ಮುಂದುವರೆಸಿ ಆದೇಶಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಜಸ್ಟೀಸ್ ಆರ್.ಗುರುರಾಜನ್, ಅಧ್ಯಕ್ಷರು, ಶುಲ್ಕ ನಿಯಂತ್ರಣ ಸಮಿತಿ ಇವರು ಸರ್ಕಾರಕ್ಕೆ ಪತ್ರ ಬರೆದು ಶುಲ್ಕ ನಿಯಂತ್ರಣ ಸಮಿತಿಯಲ್ಲಿ ಪ್ರಸ್ತುತ ವರ್ಷದಲ್ಲೂ ಸಹ ಕಾರ್ಯನಿರ್ವಹಿಸುತ್ತಿರುವ ಶ್ರೀ.ಕೆ.ವಿ.ರಾಧಾಕೃಷ್ಣನ್ ಮತ್ತು ಡಾ॥ಎಸ್.ಬಿಸಲಯ್ಯ ರವರುಗಳನ್ನು ಸಮಿತಿಯ ಸದಸ್ಯರುಗಳನ್ನಾಗಿ ಮುಂದುವರೆಸಲು ವಿಸ್ತರಣಾ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಶುಲ್ಕ ನಿಯಂತ್ರಣ ಸಮಿತಿಯ ಅಧ್ಯಕ್ಷರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುವ ಅಂಶದ ಬಗ್ಗೆ ಪರಿಶೀಲಿಸಿ, ಸಮಿತಿಯ ಸದಸ್ಯರುಗಳನ್ನಾಗಿ 2016–17ನೇ ಸಾಲಿನಲ್ಲೂ ಸಹ ಶ್ರೀ ಕೆ.ವಿ.ರಾಧಾಕೃಷ್ಣನ್ ಮತ್ತು ಡಾ॥ಎಸ್.ಬಿಸಲಯ್ಯ ರವರುಗಳನ್ನು ಮುಂದುವರೆಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಇಡಿ 146 ಟಿಇಸಿ 2014 ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2016–17 ನೇ ಸಾಲಿನಲ್ಲಿ ವೃತ್ತಿಪರ ಶಿಕ್ಷಣ ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ರಚಿಸಿರುವ ಶುಲ್ಕ ನಿಯಂತ್ರಣ ಸಮಿತಿಯ ಅಧ್ಯಕ್ಷರಿಂದ ನಾಮನಿರ್ದೇಶಿತಗೊಂಡ ಶ್ರೀ.ಕೆ.ವಿ.ರಾಧಾಕೃಷ್ಣ ಮತ್ತು ಡಾ॥ಎಸ್.ಬಿಸಲಯ್ಯ ಇವರುಗಳನ್ನು ಸದರಿ ಸಮಿತಿಯ ಸದಸ್ಯರುಗಳನ್ನಾಗಿ ಮುಂದಿನ ಆದೇಶದವರೆಗೆ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**PR-190** **ಎಸ್.ವೆಂಕಟೇಶ್**

**SC-100** ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ.(ತಾಂತ್ರಿಕ)

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲ್ಲೂಕು, ಗುಡೆಕೋಟೆ ಗ್ರಾಮ ಸ.ನಂ. 909, 908, 129 ಮತ್ತು ಹಾಲಸಾಗರ ಗ್ರಾಮದ ಸ.ನಂ. 236 ಹಾಗೂ 488ಗಳ ಪೈಕಿ ಒಟ್ಟು ವಿಸ್ತೀರ್ಣ 1300.29 ಎಕರೆ (526.42 ಹೆಕ್ಟೇರ್) ಸರ್ಕಾರಿ ಜಮೀನನ್ನು ಪರಿಹಾರಾತ್ಮಕ ನೆಡುತೋಪು ಬೆಳೆಸಲು ಮೆ: ಎನ್.ಎಂ.ಡಿ.ಸಿ ದೋಣಿಮಲೈ ಸಂಡೂರು ಇವರ ಪರವಾಗಿ ಅರಣ್ಯ ಇಲಾಖೆಗೆ ವರ್ಗಾಹಿಸುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರ ಪತ್ರ ಸಂಖ್ಯೆ: ಕಂ:ಭೂಮಿ/ಸಿ&ಡಿ/11/2015–16, ದಿನಾಂಕ: 29–09–2015

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರದಲ್ಲಿ, ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರು ಮೆ: ಎನ್.ಎಂ.ಡಿ.ಸಿ ದೋಣಿಮಲೈ, ಸಂಡೂರು ಇವರ ಎಂ.ಎಲ್.ನಂ.2396ರಂತೆ ಗಣಿ ಗುತ್ತಿಗೆಯನ್ನು ಸರ್ಕಾರವು ಮಂಜೂರು ಮಾಡಿದ್ದು, ಸದರಿ ಜಮೀನು ಅರಣ್ಯ ಜಮೀನಾಗಿರುವುದರಿಂದ, ಅರಣ್ಯ ಜಮೀನಿಗೆ ಸಮಾನಾಂತರವಾಗಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲ್ಲೂಕಿನ ಗುಡೆಕೋಟೆ ಗ್ರಾಮದ ಸ.ನಂ.909, 908, 129 ಮತ್ತು ಹಾಲಸಾಗರ ಸ.ನಂ. 236 ಮತ್ತು 488ಗಳ ಪೈಕಿ ಒಟ್ಟು ವಿಸ್ತೀರ್ಣ 1300.29 ಎಕರೆ (526.42 ಹೆಕ್ಟೇರ್) ಜಮೀನನ್ನು ಅರಣ್ಯ ಇಲಾಖೆಗೆ ವರ್ಗಾಯಿಸುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾಪಿತ ಜಮೀನುಗಳು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 51 ಎಲ್‌ಜಿಪಿ 81 ದಿನಾಂಕ: 18–08–1981ರಡಿ ಸರ್ಕಾರವು ಹೊರಡಿಸಿರುವ ಲ್ಯಾಂಡ್ ಬ್ಯಾಂಕ್ ಜಮೀನುಗಳನ್ನು ಪರಿಶೀಲಿಸಲಾಗಿ ಸದರಿ ಜಮೀನುಗಳು ಲ್ಯಾಂಡ್ ಬ್ಯಾಂಕ್‌ನಲ್ಲಿ ಸೇರಿಸಿರುವುದಿಲ್ಲವಾದ್ದರಿಂದ ಈ ಜಮೀನುಗಳನ್ನು ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 106 ಎಲ್‌ಜಿಪಿ 88 ದಿನಾಂಕ: 07–06–1993ರಂತೆ ಲ್ಯಾಂಡ್ ಬ್ಯಾಂಕ್‌ನಲ್ಲಿ ಸೇರಿಸಿಕೊಂಡು ಒಟ್ಟು ವಿಸ್ತೀರ್ಣ 1300.29 ಎಕರೆ (526.42 ಹೆಕ್ಟೇರ್) ಜಮೀನನ್ನು ಮೆ. ಎನ್.ಎಂ.ಡಿ.ಸಿ ದೋಣಿಮಲೈ ಸಂಡೂರು, ಗಣಿಗುತ್ತಿಗೆ ಸಂಖ್ಯೆ: 2396, ಇವರ ಪರವಾಗಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಅರಣ್ಯ ಇಲಾಖೆಗೆ ಹಸ್ತಾಂತರಿಸುವ ಕುರಿತು ಪ್ರಸ್ತಾಪಿಸಿ ಅರಣ್ಯ ಸಂರಕ್ಷಣಾ ಅಧಿನಿಯಮ 1980ರ ಚಾಪ್ಟರ್–3 ಪ್ಯಾರಾ 3(2)ರಂತೆ ಅರಣ್ಯ ಪ್ರದೇಶವನ್ನು ಅರಣ್ಯೇತರ ಚಟುವಟಿಕೆಗಳಿಗೆ ಮಂಜೂರು ಮಾಡುವಾಗ ಅದಕ್ಕೆ ಬದಲಾಗಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಸಿ ಮತ್ತು ಡಿ ವರ್ಗದ ಜಮೀನನ್ನು ಗುರುತಿಸಿ ಅರಣ್ಯ ಇಲಾಖೆಗೆ ಮ್ಯುಟೇಷನ್ ಮಾಡಿಸಿ ವರ್ಗಾವಣೆ ಮಾಡಬೇಕಾಗಿರುವುದರಿಂದ ಸರ್ಕಾರಿ ಜಮೀನನ್ನು ಮೊದಲಿಗೆ ಲ್ಯಾಂಡ್ ಬ್ಯಾಂಕ್‌ಗೆ ಸೇರಿಸಿಕೊಂಡು ನಂತರ ಸದರಿ ಜಮೀನಿನಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಕೆಲವೊಂದು ನಿಬಂಧನೆಗಳೊಂದಿಗೆ ಅರಣ್ಯ ಇಲಾಖೆಗೆ ವರ್ಗಾಯಿಸಬಹುದೆಂದು ಪ್ರಸ್ತಾಪಿಸಲಾಗಿರುತ್ತದೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 47 ಎಲ್‌ಜಿಇ 2015 ಬೆಂಗಳೂರು, ದಿನಾಂಕ: 08–02–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲ್ಲೂಕು, ಗುಡೆಕೋಟೆ ಗ್ರಾಮದ ಸ.ನಂ. 909ರಲ್ಲಿ 121.49 ಎಕರೆ, ಸ.ನಂ.908ರಲ್ಲಿ 21.00 ಎಕರೆ, ಸ.ನಂ. 129ರಲ್ಲಿ 701.13 ಎಕರೆ ಮತ್ತು ಹಾಲಸಾಗರ ಗ್ರಾಮದ ಸ.ನಂ. 236ರಲ್ಲಿ 275.91 ಎಕರೆ ಮತ್ತು ಸ.ನಂ. 488ರಲ್ಲಿ 180.76 ಎಕರೆ ಒಟ್ಟು 1300.29 ಎಕರೆ (526.42 ಹೆಕ್ಟೇರ್) ಸರ್ಕಾರಿ ಜಮೀನನ್ನು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 106 ಎಲ್‌ಜಿಪಿ 88 ದಿನಾಂಕ: 07–06–1993ರಂತೆ ಮೊದಲಿಗೆ ಲ್ಯಾಂಡ್ ಬ್ಯಾಂಕ್‌ಗೆ ಸೇರಿಸಿಕೊಂಡು ನಂತರ ಮೆ. ಎನ್.ಎಂ.ಡಿ.ಸಿ ದೋಣಿಮಲೈ, ಸಂಡೂರು, ಗಣಿಗುತ್ತಿಗೆ ಸಂಖ್ಯೆ: 2396 ಇವರ ಪರವಾಗಿ ಪರಿಹಾರಾತ್ಮಕ ನೆಡುತೋಪು ಬೆಳಸಲು ಈ ಕೆಳಕಂಡ ಷರತ್ತುಗಳೊಂದಿಗೆ ಅರಣ್ಯ ಇಲಾಖೆಗೆ ವರ್ಗಾಯಿಸಲು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

**ಷರತ್ತುಗಳು**

1) ವರ್ಗಾವಣೆಯಾದ ಜಮೀನನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್.ಡಿ 27 ಎಲ್.ಜಿಪಿ 2011 ದಿನಾಂಕ: 06-04-2011ರಂತೆ ಕ್ರಮವಹಿಸುವುದು.

2) ವರ್ಗಾವಣೆ ಪಡೆದ ಇಲಾಖೆಗೆ ವರ್ಗಾಯಿಸಿದ ಜಮೀನಿನ ಅವಶ್ಯಕತೆ ಇಲ್ಲದೇ ಇದ್ದಲ್ಲಿ ಮರಳಿ ಕಂದಾಯ ಇಲಾಖೆಗೆ ವಾಪಸ್ಸು ಪಡೆಯತಕ್ಕದ್ದು.

3) ವರ್ಗಾವಣೆಯಾದ ಜಮೀನನ್ನು ಅರಣ್ಯ ಇಲಾಖೆಯು ನೆಡುತೋಪು ಬೆಳೆಸುವ ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸತಕ್ಕದ್ದು.

4) ಈ ಮೇಲ್ಕಂಡ ಷರತ್ತುಗಳೊಂದಿಗೆ ಸರ್ಕಾರದಿಂದ ಅನ್ವಯವಾಗುವ ಎಲ್ಲಾ ಕಾಯ್ದೆ ಕಾನೂನು ಹಾಗೂ ಷರತ್ತು ನಿಬಂಧನೆಗೊಳಪಡಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

PR-191
SC-25

**ರೇವಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ.(ಭೂ ಮಂಜೂರಾತಿ-3)

## ಇಂಧನ ಸಚಿವಾಲಯ

**ವಿಷಯ :** **2015-16ನೇ ಸಾಲಿನಲ್ಲಿ ವಿದ್ಯುತ್ ಕ್ಷೇತ್ರದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.**

**ಓದಲಾಗಿದೆ :**
1. 2015-16ನೇ ಸಾಲಿನ ಆಯವ್ಯಯ.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್ಆರ್ 2015/ಪಿ1, ದಿನಾಂಕ: 18.06.2015 ಮತ್ತು 31.10.2015.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್ಆರ್ 2015, ದಿನಾಂಕ: 20.06.2015, 01.09.2015 ಮತ್ತು 09.11.2015.
4. ಬೆವಿಕಂ ಪತ್ರ ಸಂಖ್ಯೆ: ಬೆವಿಕಂ/ವ್ಯನಿ/ಅಸ/ಬಿಸಿ-1/2015-16/108, ದಿನಾಂಕ: 02.11.2015.
5. ಮವಿಕಂ ಈ-ಮೇಲ್ ದಿನಾಂಕ: 19.11.2015.
6. ಹುವಿಕಂ ಪತ್ರ ಸಂಖ್ಯೆ: ಹುವಿಕಂ/ಅಇ/ಪಿಎಮ್ಸಿ/ಕಾಇ-2/ಸಕಾಇ-1/20424-27, ದಿನಾಂಕ: 13.11.2015.
7. ಗುವಿಕಂ ಪತ್ರ ಸಂಖ್ಯೆ: ಗುವಿಕಂ/ಮುಇ(ಸಿಪಿ)/ಅಇ(ಟಿಪಿ)/ಕಾಇ(ಟಿಪಿ)/ಸಕಾಇ(ಟಿಪಿ)/2015-16/40288-93, ದಿನಾಂಕ: 20.11.2015.
8. ಚಾವಿಸನಿನಿ ಪತ್ರ ಸಂಖ್ಯೆ: ಅಇ/ಯೋಜನೆ/ಕಾಇ-3/ಸಕಾಇ-3/15-1/5293-297, ದಿನಾಂಕ: 20.11.2015.

**ಪ್ರಸ್ತಾವನೆ :**

1) ಮೇಲಿನ ಕ್ರ.ಸಂ-1ರಲ್ಲಿ ಓದಲಾದ 2015-16ನೇ ಸಾಲಿನ ಆಯವ್ಯಯದಲ್ಲಿ ₹.727.02 ಕೋಟಿಗಳನ್ನು ಇಂಧನ ವಲಯದಲ್ಲಿ ಸರ್ಕಾರದ ಬಂಡವಾಳದ ಹೂಡಿಕೆಗಾಗಿ, ಲೆಕ್ಕಶೀರ್ಷಿಕೆ 4801-01-190-0-09-211(ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ-ಬಂಡವಾಳ ಹೂಡಿಕೆಗಾಗಿ ₹.677.83 ಕೋಟಿಗಳನ್ನು, ಲೆಕ್ಕಶೀರ್ಷಿಕೆ 4801-01-190-0-09-422(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ-ಪರಿಶಿಷ್ಟ ಜಾತಿ ಉಪಯೋಜನೆಗಾಗಿ ₹.36.89 ಕೋಟಿಗಳು ಮತ್ತು ಲೆಕ್ಕಶೀರ್ಷಿಕೆ 4801-01-190-0-09-423(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ-ಗಿರಿಜನ ಉಪಯೋಜನೆಗಾಗಿ ₹.12.30 ಕೋಟಿಗಳು ಸೇರಿದಂತೆ ಒಟ್ಟಾರೆ ₹.727.02 ಕೋಟಿಗಳ ಬಂಡವಾಳ ಒದಗಿಸಲಾಗಿದೆ.

2) ಮೇಲಿನ ಕ್ರಮ ಸಂಖ್ಯೆ-2ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ, 1957ರ ಕಲಂ 1-Aರಲ್ಲಿ ಪ್ರದತ್ತವಾದ ಅಧಿಕಾರದಂತೆ ಕರ್ನಾಟಕ ಆರ್ಥಿಕ ಸಂಹಿತೆ, 1957ರ ಕಲಂ 17(ಸಿ) (4) ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿ ಆದೇಶಿಸಲಾಗಿದೆ.

3) ಮೇಲಿನ ಕ್ರಮ ಸಂಖ್ಯೆ 3ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ 2015-16ನೇ ಸಾಲಿಗೆ ಲೆಕ್ಕಶೀರ್ಷಿಕೆ 4801-01-190-0-09-211 (ಯೋಜನೆ) ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆಗಾಗಿ ಈವರೆವಿಗೆ ₹.438.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

4) 2015-16ನೇ ಸಾಲಿನಲ್ಲಿ ವಿದ್ಯುತ್ ಸರಬರಾಜು ಕಂಪನಿಗಳು ಈ ಕೆಳಕಂಡ ಕಾಮಗಾರಿಗಳನ್ನು ಅನುಷ್ಠನಗೊಳಿಸಲಾಗುವುದೆಂದು ಮೇಲಿನ ಕ್ರಮ ಸಂಖ್ಯೆ 4 ರಿಂದ 8ರಲ್ಲಿ ಓದಲಾದ ಪತ್ರಗಳಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

| ವಿಸಕಂಗಳು | ಕಾಮಗಾರಿಯ ವಿವರಗಳು | ಯೋಜನೆಯ ವೆಚ್ಚ (₹. ಕೋಟಿಗಳಲ್ಲಿ) |
|---|---|---|
| ಬೆವಿಕಂ | ಬೆಂಗಳೂರು ಗ್ರಾಮಾಂತರ ಪ್ರದೇಶದಲ್ಲಿ 11 ಕೆ.ವಿ ವಿದ್ಯುತ್ ಮಾರ್ಗಗಳ ಸ್ಥಳಾಂತರ (Evacuation) ಕಾಮಗಾರಿ ಹಾಗೂ ನಗರ ಪ್ರದೇಶಗಳಲ್ಲಿ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸುವ ಕಾಮಗಾರಿ. | 26.00 |
| ಮವಿಕಂ | Conversion of Over head Lines to UG Cables, ವಿದ್ಯುತ್ ಅಪಘಾತಗಳನ್ನು ತಡೆಗಟ್ಟಲು ವಿದ್ಯುತ್ ನಿರ್ವಹಣ ಮತ್ತು ಸುಧಾರಣಾ ಕಾಮಗಾರಿಗಳು. | 21.00 |

| ವಿಸಕಂಗಳು | ಕಾಮಗಾರಿಯ ವಿವರಗಳು | ಯೋಜನೆಯ ವೆಚ್ಚ (₹. ಕೋಟಿಗಳಲ್ಲಿ) |
|---|---|---|
| ಹುವಿಕಂ | Development of software for remote monitoring of monthly Energy consumption and facilitating the relevant data for billing of water works and high valued LT (Industrial & Commercial) Installations in Urban area | 20.95 |
| ಗುವಿಕಂ | Conversion of Over head Lines to UG Cable in Kalaburagi City. | 20.00 |
| ಚಾವಿಸನಿನಿ | ನಗರ ಪ್ರದೇಶಗಳಲ್ಲಿ ವಿದ್ಯುತ್ ವಿತರಣ ಪರಿವರ್ತಕ ಕೇಂದ್ರಗಳಿಗೆ ಮಾಪಕಗಳನ್ನು ಅಳವಡಿಸುವುದು. | 20.00 |
| | ಒಟ್ಟು | **107.95** |

5) ವಿದ್ಯುತ್ ಸರಬರಾಜು ಕಂಪನಿಗಳ ಮನವಿಗಳನ್ನು ಪುರಸ್ಕರಿಸಿ, ಒಟ್ಟಾರೆ ₹.70.00 ಕೋಟಿಗಳ ಈಕ್ವಿಟಿ ಬಂಡವಾಳವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 16 ಪಿಎಸ್‌ಆರ್ 2015/ಪಿ1, ಬೆಂಗಳೂರು, ದಿನಾಂಕ: 03.12.2015.**

1. 2015–16ನೇ ಸಾಲಿಗೆ ಸರ್ಕಾರವು ವಿದ್ಯುತ್ ಸರಬರಾಜು ಕಂಪನಿಗಳಿಗೆ ₹.70.00 ಕೋಟಿಗಳನ್ನು (₹. ಎಪ್ಪತ್ತು ಕೋಟಿಗಳು ಮಾತ್ರ) ವಿದ್ಯುತ್ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಲೆಕ್ಕ ಶೀರ್ಷಿಕೆ "4801–01–190–0–09–211 Investment in Power Utilities (ಯೋಜನೆ)" ಯಡಿ ಈ ಕೆಳಕಂಡ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ.

| ಕ್ರಮ ಸಂಖ್ಯೆ | ವಿಸಕಂಗಳು | ಕಾಮಗಾರಿಯ ವಿವರ | ಮೊತ್ತ |
|---|---|---|---|
| 1 | ಬೆವಿಕಂ | ಬೆಂಗಳೂರು ಗ್ರಾಮಾಂತರ ಪ್ರದೇಶದಲ್ಲಿ 11 ಕೆ.ವಿ ವಿದ್ಯುತ್ ಮಾರ್ಗಗಳ ಸ್ಥಳಾಂತರ (Evacuation) ಕಾಮಗಾರಿ ಹಾಗೂ ನಗರ ಪ್ರದೇಶಗಳಲ್ಲಿ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸುವ ಕಾಮಗಾರಿ | 20.00 |
| 2 | ಮವಿಕಂ | Conversion of Over head Lines to UG Cables, ವಿದ್ಯುತ್ ಅಪಘಾತಗಳನ್ನು ತಡೆಗಟ್ಟಲು ವಿದ್ಯುತ್ ನಿರ್ವಹಣ ಮತ್ತು ಸುಧಾರಣಾ ಕಾಮಗಾರಿಗಳು. | 10.00 |
| 3 | ಹುವಿಕಂ | Development of software for remote monitoring of monthly Energy consumption and facilitating the relevant data for billing of water works and high valued LT (Industrial & Commercial) Installations in Urban area. | 15.00 |
| 4 | ಗುವಿಕಂ | Conversion of Over head Lines to UG Cable in Kalaburagi City. | 15.00 |
| 5 | ಚಾವಿಸನಿನಿ | ನಗರ ಪ್ರದೇಶಗಳಲ್ಲಿ ವಿದ್ಯುತ್ ವಿತರಣ ಪರಿವರ್ತಕ ಕೇಂದ್ರಗಳಿಗೆ ಮಾಪಕಗಳನ್ನು ಅಳವಡಿಸುವುದು | 10.00 |
| | | ಒಟ್ಟು | **70.00** |

2. ವಿದ್ಯುತ್ ಸರಬರಾಜು ಕಂಪನಿಗಳು ಮೇಲಿನ ಕೋಷ್ಟಕದಲ್ಲಿ ಬಿಡುಗಡೆ ಮಾಡಿರುವ ಮೊತ್ತಕ್ಕೆ, ಸರ್ಕಾರದ ಉಪಕಾರ್ಯದರ್ಶಿ, ಇಂದನ ಇಲಾಖೆರವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (payee's receipts) ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಬಂಡವಾಳ (Equity) ವನ್ನು ಮೇಲಿನ ಕೋಷ್ಠಕದಲ್ಲಿ ನಮೂದಿಸಿರುವ ಕಾಮಗಾರಿಗಳಲ್ಲಿ ಹೂಡಿರುವ ಬಗ್ಗೆ ಮುಂದೆ ಆರ್ಥಿಕ ಮತ್ತು ಭೌತಿಕ ಪ್ರಗತಿ ಸಲ್ಲಿಸುವುದು, ಬಿಡುಗಡೆಯಾದ ಬಂಡವಾಳದ ಬಳಕೆಯ ಬಗ್ಗೆ ಬಳಕೆಯ ಪ್ರಮಾಣ ಪತ್ರ (Utillisation Certificate) ವನ್ನು ಸರ್ಕಾರಕ್ಕೆ ಒದಗಿಸುವುದು.

4. ವಿದ್ಯುತ್ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5. ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಅನುಮೋದನೆಗೆ ವಿನಾಯತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1, ದಿನಾಂಕ: 31.10.2015ರಲ್ಲಿ ನೀಡಿದೆ.

6. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09.10.2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

**PR. 198**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ ಹಾಗೂ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಮತ್ತು 2014–15ನೇ ಸಾಲಿನ ಬಾಕಿ ಸಹಾಯಧನ ಹಾಗೂ ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004, ದಿನಾಂಕ: 15.03.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008, ದಿನಾಂಕ: 04.09.2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013, ದಿನಾಂಕ: 17.05.2013.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್6 ಪಿಎಸ್‌ಆರ್ 2015, ದಿನಾಂಕ: 29.04.2015, 18.05.2015, 01.06.2015(TA), 04.06.2015, 01.07.2015, 03.08.2015, 01.09.2015 ಮತ್ತು 15.10.2015.
5. ಸರ್ಕಾರಿ ಆದೇಶ ಸಂಖ್ಯೆ: ಇಎನ್6 ಪಿಎಸ್‌ಆರ್ 2015/ಪಿ4,ದಿನಾಂಕ: 22.06.2015(TA), 21.07.2015(TA), 25.08.2015(TA), 23.09.2015(TA) ಮತ್ತು 28.10.2015(TA).
6. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2015, ದಿನಾಂಕ 22.06.2015.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ" ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ: 01.08.2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.

3. ಮೇಲಿನ ಕ್ರಮಾಂಕ–3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ದಿನಾಂಕ: 13.05.2013ಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ದಂಡ ಸಹಿತ ವಿದ್ಯುತ್ ಬಾಕಿ ಶುಲ್ಕ ₹. 319.61 ಕೋಟಿಗಳನ್ನು ಮನ್ನಾ ಮಾಡಲಾಗಿದೆ. ಇದರಲ್ಲಿ 2014–15ನೇ ಸಾಲಿನಲ್ಲಿ ₹. 213.07 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. 2015–16ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ₹. 106.54 ಕೋಟಿಗಳಲ್ಲಿ ಮೇಲೆ ಕ್ರಮಾಂಕ–(4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ₹. 62.16 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಬಾಕಿ ಉಳಿದಿರುವ ₹. 44.38 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

4. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ₹. 7197.16 ಕೋಟಿಗಳ ಸಹಾಯಧನವನ್ನು ನಿಗಧಿಪಡಿಸಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5) ಮತ್ತು (6)ರಲ್ಲಿನ ಸರ್ಕಾರಿ ಆದೇಶಗಳಲ್ಲಿ 2015–16ನೇ ಸಾಲಿನ ಅಕ್ಟೋಬರ್ 2015ರವರೆಗೆ ಸಹಾಯಧನ ₹. 3465.59 ಕೋಟಿಗಳನ್ನು ಬಿಡುಗಡೆ ಮಾಡಿದೆ.

   ಆಯೋಗದ ದರ ಆದೇಶ 2013ರಲ್ಲಿ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ₹.443.49 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ₹.55.41 ಕೋಟಿಗಳನ್ನು ಬಿಡುಗಡೆ ಮಾಡಿದ ಇನ್ನು ₹.388.08 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

   2014–15ನೇ ಸಾಲಿನ ಬಾಕಿ ಸಹಾಯಧನ ₹ 408.56 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ₹.56.66 ಕೋಟಿಗಳನ್ನು ಬಿಡುಗಡೆ ಮಾಡಿದ್ದು, ಇನ್ನು ₹. 351.90 ಕೋಟಿಗಳ ಬಾಕಿ ಬಿಡುಗಡೆ ಮಾಡಬೇಕಾಗಿದೆ.

5. 2015–16ನೇ ಸಾಲಿಗೆ ಆಯೋಗ ಅನುಮೊದಿಸಿರುವ ₹.7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ₹.375.00 ಕೋಟಿಗಳನ್ನು, 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಬಾಕಿ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ₹.16.01 ಕೋಟಿಗಳನ್ನು ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾ ₹. 8.88 ಕೋಟಿಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಎಫ್‌ಡಿ 996 ವೆಚ್ಚ–1/2015, ದಿನಾಂಕ: 28.07.2015ರಲ್ಲಿ ಸಹಮತಿ ನೀಡಿದೆ.

6. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2015–16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ–78ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ₹.7498.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5) ಮತ್ತು (6)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಒಟ್ಟು ₹.3465.59 ಕೋಟಿಗಳನ್ನು ಬಿಡುಗಡೆ ಮಾಡಿದೆ. ವಿವರ ಈ ಕೆಳಕಂಡಂತಿದೆ.

₹. ಕೋಟಿಗಳು

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹.7197.16 ಕೋಟಿಗಳಲ್ಲಿ ನಗದು ರೂಪವಾಗಿ ನೀರಾವರಿ ಪಂಪುಸೆಟ್ಟು, ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ಉಚಿತ ವಿದ್ಯುತ್ ಸರಬರಾಜಿಗಾಗಿ ಸಹಾಯಧನದ ಬಾಬ್ತು | 2725.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು. | 55.41 |
| 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು. | 56.66 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು. | 62.16 |
| ತ್ರಿಪಕ್ಷೀಯ ಹೊಂದಾಣಿಕೆ–ಏಪ್ರಿಲ್ 2015 ರಿಂದ ಸೆಪ್ಟೆಂಬರ್ 2015ರ ಮಾಹೆಯವರೆಗೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು. | 564.36 |
| ಸಹಾಯ ಧನದ ರೂಪದಲ್ಲಿ ಶ್ರೀ ಸತ್ಯ ಸಾಯಿ ಆಸ್ಪತ್ರೆಯ ವಿದ್ಯುತ್ ಬಿಲ್ಲಿನ ಬಾಬ್ತನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ. | 2.00 |
| ಅಕ್ಟೋಬರ್ 2015 ರವರೆಗೆ ಬಿಡುಗಡೆ ಮಾಡಿರುವ ಒಟ್ಟು ಮೊತ್ತ. | **3465.99** |

7. ನವೆಂಬರ್ 2015ರ ಮಾಹೆಗೆ ಸಹಾಯಧನ, ಬಾಕಿ ಸಹಾಯಧನ ಹಾಗೂ ಹೆಚ್ಚುವರಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಮರುಪಾವತಿ ಮೊತ್ತಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ.

₹. ಕೋಟಿಗಳು

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹.7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ | 375.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಸಹಾಯಧನ ಬಾಬ್ತು ಪ್ರತಿ ಮಾಹೆಯಾನ | 16.01 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ | 8.88 |
| ನವೆಂಬರ್ 2015 ಮಾಹೆಗೆ ಒಟ್ಟು ಬಿಡುಗಡೆ | **399.89** |

ಅದರಂತೆ ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 6 ಪಿಎಸ್ಆರ್ 2015, ಬೆಂಗಳೂರು, ದಿನಾಂಕ: 03.12.2015.**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2015–16ನೇ ಸಾಲಿನ ನವೆಂಬರ್ 2015ರ ಮಾಹೆಗೆ ₹.375.00 ಕೋಟಿಗಳ (₹. ಮುನ್ನೂರ ಎಪ್ಪತ್ತೈದು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106" (ಸಹಾಯಧನ) (ಯೋಜನೇತರ) ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳಿಗೆ | 2015–16ರ ನವೆಂಬರ್ ಮಾಹೆಗೆ ಬಿಡುಗಡೆ |
|---|---|---|---|
| ಬೆವಿಕಂ | 36.00 | 3.00 | 39.00 |
| ಮವಿಕಂ | 27.00 | 0.00 | 27.00 |
| ಹುವಿಕಂ | 146.00 | 4.00 | 150.00 |
| ಗುವಿಕಂ | 80.00 | 6.00 | 86.00 |
| ಚಾವಿಸನಿನಿ | 66.00 | 1.00 | 67.00 |
| ಹು.ಗ್ರಾ.ಸ.ಸಂ | 6.00 | 0.00 | 6.00 |
| **ಒಟ್ಟು** | **361.00** | **14.00** | **375.00** |

2. 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಸಹಾಯಧನದ ಬಾಬ್ತು ಕ್ರಮವಾಗಿ ₹.9.00 ಕೋಟಿ ಹಾಗೂ ₹.7.01 ಕೋಟಿಗಳನ್ನು ನವೆಂಬರ್ 2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| **ವಿಸಕಂಗಳು** | **2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು** | **2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು** | **ಒಟ್ಟು** |
|---|---|---|---|
| ಬೆವಿಕಂ | 1.38 | 1.25 | 2.63 |
| ಮವಿಕಂ | 1.25 | 0.50 | 1.75 |
| ಹುವಿಕಂ | 0.00 | 2.82 | 2.82 |
| ಗುವಿಕಂ | 3.77 | 1.31 | 5.08 |
| ಚಾವಿಸನಿನಿ | 2.60 | 1.13 | 3.73 |
| **ಒಟ್ಟು** | **9.00** | **7.01** | **16.01** |

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ₹. 8.88 ಕೋಟಿಗಳನ್ನು ನವೆಂಬರ್ 2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| **ವಿಸಕಂಗಳು** | **ಒಟ್ಟು** |
|---|---|
| ಬೆವಿಕಂ | 2.50 |
| ಮವಿಕಂ | 1.00 |
| ಹುವಿಕಂ | 2.00 |
| ಗುವಿಕಂ | 0.50 |
| ಚಾವಿಸನಿನಿ | 2.88 |
| **ಒಟ್ಟು** | **8.88** |

4. ಮೇಲಿನ ಆದೇಶ ಭಾಗದ ಕಂಡಿಕೆ 1, 2 ಮತ್ತು 3ರಲ್ಲಿ ಬಿಡುಗಡೆ ಮಾಡಿರುವ ಸಹಾಯಧನ, ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| **ವಿದ್ಯುತ್ ಸರಬರಾಜು ಕಂಪನಿಗಳು** | **ನವೆಂಬರ್ 2015ರ ಮಾಹೆಗೆ ಸಹಾಯಧನ ಬಿಡುಗಡೆ** | | | **ನವೆಂಬರ್–2015ರ ಮಾಹೆಗೆ ಹೆಚ್ಚುವರಿ ಸಹಾಯಧನ ಮತ್ತು ಬಾಕಿ ಸಹಾಯಧನ ವಿಸಕಂಗಳಿಗೆ ಬಿಡುಗಡೆ** | | | **ಭಾ.ಜ್ಯೋ/ಕು.ಜೋ ಬಾಕಿ ಮನ್ನಾ ಬಾಬ್ತು ನವೆಂಬರ್ 2015ರ ಮಾಹೆಗೆ** | **ವಿಸಕಂಗಳ ಪರವಾಗಿ ಕವಿನಿನಿಗೆ** | **ವಿಸಕಂ ಗಳಿಗೆ** | **ಒಟ್ಟು** |
|---|---|---|---|---|---|---|---|---|---|---|
| | **ವಿಸಕಂಗಳ ಪರವಾಗಿ ಕವಿನಿನಿಗೆ** | **ವಿಸಕಂಗಳಿಗೆ** | **ಒಟ್ಟು** | **2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು** | **2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು** | **ಒಟ್ಟು** | | | | |
| **ಬೆವಿಕಂ** | 39.00 | 0.00 | **39.00** | 1.38 | 1.25 | * **2.63** | * 2.50 | 44.13 | 0.00 | **44.13** |
| **ಮವಿಕಂ** | 27.00 | 0.00 | **27.00** | 1.25 | 0.50 | * **1.75** | * 1.00 | 29.75 | 0.00 | **29.75** |
| **ಹುವಿಕಂ** | 105.00 | 45.00 | **150.00** | 0.00 | 2.82 | **2.82** | 2.00 | 105.00 | 49.82 | **154.82** |
| **ಗುವಿಕಂ** | 61.00 | 25.00 | **86.00** | 3.77 | 1.31 | **5.08** | 0.50 | 61.00 | 30.58 | **91.58** |
| **ಚಾವಿಸನಿನಿ** | 42.00 | 25.00 | **67.00** | 2.60 | 1.13 | **3.73** | 2.88 | 42.00 | 31.61 | **73.61** |
| **ಹು.ಗ್ರಾ.ಸ.ಸಂ** | 0.00 | 6.00 | **6.00** | 0.00 | 0.00 | **0.00** | 0.00 | 0.00 | 6.00 | **6.00** |
| **ಒಟ್ಟು** | **274.00** | **101.00** | **375.00** | **9.00** | **7.01** | **16.01** | **8.88** | **281.88** | **118.01** | **399.89** |

* ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ ಹಾಗೂ ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಮೊತ್ತವನ್ನು ಈ ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

5. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ₹. 105.00 ಕೋಟಿಗಳಲ್ಲಿ ₹. 20.00 ಕೋಟಿಗಳನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಎನರ್ಜಿ ಬ್ಯಾಲೆನ್ಸಿಂಗ್ ಹೊಂದಾಣಿಕೆ (Energy Balancing Adjustment) ಮೊತ್ತಕ್ಕೆ ಸರಿಹೊಂದಿಸಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ವಿದ್ಯುತ್ ಖರೀದಿ ವೆಚ್ಚಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

6. ಹುಕ್ಕೇರಿ ಗ್ರಾಮೀಣ ಸಹಕಾರ ಸಂಘಕ್ಕೆ ಬಿಡುಗಡೆ ಮಾಡಿರುವ ಸಹಾಯಧನ ₹.6.00 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಖರೀದಿ ಮಾಡಿರುವ ವಿದ್ಯುತ್ ವೆಚ್ಚದ ಬಾಬ್ತು ಹೊಂದಾಣಿಕೆ ಮೂಲಕ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ.
7. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ₹.281.88 ಕೋಟಿಗಳನ್ನು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ₹.55.82 ಕೋಟಿಗಳನ್ನು, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ₹.30.58 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ₹.31.61 ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯುತಕ್ಕದ್ದು, ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate)ಸಲ್ಲಿಸತಕ್ಕದ್ದು.
9. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.
10. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು, ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.
11. 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳನ್ನು ವಿಸಕಂಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮನ್ನಾ ಮಾಡಿರುವ ಮೊತ್ತದ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
12. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಎಫ್‌ಡಿ 996 ವೆಚ್ಚ–1/2015, ದಿನಾಂಕ: 28.07.2015ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 4 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09.10.2015ರಲ್ಲಿ 2015–16ನೇ ಸಾಲಿನ ಮೂರನೇ ತ್ರೈಮಾಸಿಕಕ್ಕೆ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR. 199**

## ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ ಹಾಗೂ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಮತ್ತು 2014–15ನೇ ಸಾಲಿನ ಬಾಕಿ ಸಹಾಯಧನ ಹಾಗೂ ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯದನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004, ದಿನಾಂಕ: 15.03.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008, ದಿನಾಂಕ: 04.09.2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013, ದಿನಾಂಕ: 17.05.2013.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015, ದಿನಾಂಕ: 29.04.2015, 18.05.2015, 01.06.2015(TA), 04.06.2015, 01.07.2015, 03.08.2015, 01.09.2015, 15.10.2015 ಮತ್ತು 03.12.2015.
5. ಸರ್ಕಾರಿ ಆದೇಶ ಸಂಖ್ಯೆ:ಇಎನ್ 6 ಪಿಎಸ್‌ಆರ್ 2015/ಪಿ–4, ದಿನಾಂಕ: 22.06.2015(TA), 21.07.2015(TA), 25.08.2015(TA), 23.09.2015(TA) ಮತ್ತು 28.10.2015(TA).
6. ಸರ್ಕಾರಿ ಆದೇಶ ಸಂಖ್ಯೆ:ಇಎನ್ 34 ಪಿಎಸ್‌ಆರ್ 2015, ದಿನಾಂಕ: 22.06.2015.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ" ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.

3. ಮೇಲಿನ ಕ್ರಮಾಂಕ-3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ದಿನಾಂಕ:13.05.2013ಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ದಂಡ ಸಹಿತ ವಿದ್ಯುತ್ ಬಾಕಿ ಶುಲ್ಕ ₹.319.61 ಕೋಟಿಗಳನ್ನು ಮನ್ನಾ ಮಾಡಲಾಗಿದೆ. ಇದರಲ್ಲಿ 2014-15ನೇ ಸಾಲಿನಲ್ಲಿ ₹.213.07 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. 2015-16ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ₹. 106.54 ಕೋಟಿಗಳಲ್ಲಿ ಮೇಲೆ ಕ್ರಮಾಂಕ-(4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ₹.71.04 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಬಾಕಿ ಉಳಿದಿರುವ ₹.35.50 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

4. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015-16ನೇ ಸಾಲಿಗೆ ₹.7197.16 ಕೋಟಿಗಳ ಸಹಾಯಧನವನ್ನು ನಿಗಧಿಪಡಿಸಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ-(4), (5)ಮತ್ತು (6) ರಲ್ಲಿನ ಸರ್ಕಾರಿ ಆದೇಶಗಳಲ್ಲಿ 2015-16ನೇ ಸಾಲಿನ ನವೆಂಬರ್-2015ರವರೆಗೆ ಸಹಾಯಧನ ₹.3865.48 ಕೋಟಿಗಳನ್ನು ಬಿಡುಗಡೆ ಮಾಡಿದೆ.

   ಆಯೋಗದ ದರ ಆದೇಶ 2013ರಲ್ಲಿ 2011-12ನೇ ಸಾಲಿನ ಹೆಚ್ಚುವರಿ ಸಹಾಯಧನ ₹.443.49 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ-(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ₹.64.41 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನು ₹.379.08 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

   2014-15ನೇ ಸಾಲಿನ ಬಾಕಿ ಸಹಾಯಧನ ₹.408.56 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ-(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ₹.63.67 ಕೋಟಿಗಳನ್ನು ಬಿಡುಗಡೆ ಮಾಡಿದ್ದು, ಇನ್ನು ₹.344.89 ಕೋಟಿಗಳ ಬಾಕಿ ಬಿಡುಗಡೆ ಮಾಡಬೇಕಾಗಿದೆ.

5. 2015-16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹.7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ₹.375.00 ಕೋಟಿಗಳನ್ನು 2011-12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014-15ನೇ ಸಾಲಿನ ಬಾಕಿ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ₹.16.01 ಕೋಟಿಗಳನ್ನು ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ ₹.8.88 ಕೋಟಿಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಎಫ್‌ಡಿ 996 ವೆಚ್ಚ-1/2015, ದಿನಾಂಕ 28.07.2015 ರಲ್ಲಿ ಸಹಮತಿ ನೀಡಿದೆ.

6. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2015-16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ-7ರ ಪುಟ ಸಂಖ್ಯೆ-78ರಲ್ಲಿ ಲೆಕ್ಕಶೀರ್ಷಿಕೆ "2801-80-101-1-04-106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ₹.7498.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ-(4), (5) ಮತ್ತು (6)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಒಟ್ಟು ₹.3865.48 ಕೋಟಿಗಳನ್ನು ಬಿಡುಗಡೆ ಮಾಡಿದೆ. ವಿವರ ಈ ಕೆಳಕಂಡಂತಿದೆ.

₹. ಕೋಟಿಗಳು

| | |
|---|---|
| 2015-16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹.7197.16 ಕೋಟಿಗಳಲ್ಲಿ ನಗದು ರೂಪವಾಗಿ ನೀರಾವರಿ ಪಂಪುಸೆಟ್ಟು, ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ಉಚಿತ ವಿದ್ಯುತ್ ಸರಬರಾಜಿಗಾಗಿ ಸಹಾಯಧನದ ಬಾಬ್ತು | 3100.00 |
| 2011-12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು. | 64.41 |
| 2014-15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು. | 63.67 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು. | 71.04 |
| ತ್ರಿಪಕ್ಷೀಯ ಹೊಂದಾಣಿಕೆ-ಏಪ್ರಿಲ್ 2015 ರಿಂದ ಅಕ್ಟೋಬರ್ 2015ರ ಮಾಹೆಯವರೆಗೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು. | 564.36 |
| ಸಹಾಯ ಧನದ ರೂಪದಲ್ಲಿ ಶ್ರೀ ಸತ್ಯ ಸಾಯಿ ಆಸ್ಪತ್ರೆಯ ವಿದ್ಯುತ್ ಬಿಲ್ಲಿನ ಬಾಬ್ತನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ. | 2.00 |
| ನವೆಂಬರ್ 2015ರವರೆಗೆ ಬಿಡುಗಡೆ ಮಾಡಿರುವ ಒಟ್ಟು ಮೊತ್ತ. | **3865.48** |

7. ಡಿಸೆಂಬರ್ 2015ರ ಮಾಹೆಗೆ ಸಹಾಯಧನ, ಬಾಕಿ ಸಹಾಯಧನ ಹಾಗೂ ಹೆಚ್ಚುವರಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಮರುಪಾವತಿ ಮೊತ್ತಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ.

₹. ಕೋಟಿಗಳು

| | |
|---|---|
| 2015-16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹.7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ | 375.00 |
| 2011-12ನೇ ಸಾಲಿನ ಹೆಚ್ಚುವರಿ ಸಹಾಯಧನದ ಹಾಗೂ 2014-15ನೇ ಸಾಲಿನ ಸಹಾಯಧನ ಬಾಬ್ತು ಪ್ರತಿ ಮಾಹೆಯಾನ | 16.01 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ | 8.88 |
| ಡಿಸೆಂಬರ್ 2015ರ ಮಾಹೆಗೆ ಒಟ್ಟು ಬಿಡುಗಡೆ | **399.89** |

ಅದರಂತೆ ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 6 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ: 05.12.2015.**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2015–16ನೇ ಸಾಲಿನ ಡಿಸೆಂಬರ್ 2015ರ ಮಾಹೆಗೆ ₹.375.00 ಕೋಟಿಗಳ (₹. ಮುನ್ನೂರ ಎಪ್ಪತ್ತೈದು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106" (ಸಹಾಯಧನ) (ಯೋಜನೇತರ) ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳಿಗೆ | 2015–16ರ ಡಿಸೆಂಬರ್ ಮಾಹೆಗೆ ಬಿಡುಗಡೆ |
|---|---|---|---|
| ಬೆವಿಕಂ | 41.00 | 3.00 | 44.00 |
| ಮವಿಕಂ | 30.00 | 0.00 | 30.00 |
| ಹುವಿಕಂ | 146.00 | 4.00 | 150.00 |
| ಗುವಿಕಂ | 74.00 | 6.00 | 80.00 |
| ಚಾವಿಸನಿನಿ | 65.00 | 1.00 | 66.00 |
| ಹು.ಗ್ರಾ.ಸ.ಸಂ | 5.00 | 0.00 | 5.00 |
| **ಒಟ್ಟು** | **361.00** | **14.00** | **375.00** |

2. 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಸಹಾಯಧನದ ಬಾಬ್ತು ಕ್ರಮವಾಗಿ ₹.9.00 ಕೋಟಿ ಹಾಗೂ ₹.7.01 ಕೋಟಿಗಳನ್ನು ಡಿಸೆಂಬರ್ 2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| ವಿಸಕಂಗಳು | 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | ಒಟ್ಟು |
|---|---|---|---|
| ಬೆವಿಕಂ | 1.38 | 3.07 | 4.45 |
| ಮವಿಕಂ | 1.25 | 0.50 | 1.75 |
| ಗುವಿಕಂ | 3.77 | 1.31 | 5.08 |
| ಚಾವಿಸನಿನಿ | 2.60 | 1.13 | 3.73 |
| ಹುಕ್ಕೇರಿ | 0.00 | 1.00 | 1.00 |
| **ಒಟ್ಟು** | **9.00** | **7.01** | **16.01** |

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ₹. 8.88 ಕೋಟಿಗಳನ್ನು ಡಿಸೆಂಬರ್ 2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| ವಿಸಕಂಗಳು | ಒಟ್ಟು |
|---|---|
| ಬೆವಿಕಂ | 2.50 |
| ಮವಿಕಂ | 1.00 |
| ಹುವಿಕಂ | 2.00 |
| ಗುವಿಕಂ | 0.50 |
| ಚಾವಿಸನಿನಿ | 2.88 |
| **ಒಟ್ಟು** | **8.88** |

4. ಮೇಲಿನ ಆದೇಶ ಭಾಗದ ಕಂಡಿಕೆ 1, 2 ಮತ್ತು 3ರಲ್ಲಿ ಬಿಡುಗಡೆ ಮಾಡಿರುವ ಸಹಾಯಧನ, ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಿ ಆದೇಶಿಸಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ರೂ. ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | ಡಿಸೆಂಬರ್ 2015ರ ಮಾಹೆಗೆ ಸಹಾಯಧನ ಬಿಡುಗಡೆ | | | ಡಿಸೆಂಬರ್–2015ರ ಮಾಹೆಗೆ ಹೆಚ್ಚುವರಿ ಸಹಾಯಧನ ಮತ್ತು ಬಾಕಿ ಸಹಾಯಧನ ವಿಸಕಂಗಳಿಗೆ ಬಿಡುಗಡೆ | | | ಭಾ.ಜ್ಯೋ/ಕು.ಜೋ ಬಾಕಿ ಮನ್ನಾ ಬಾಬ್ತು ಡಿಸೆಂಬರ್ 2015ರ ಮಾಹೆಗೆ | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂ ಗಳಿಗೆ | ಒಟ್ಟು |
|---|---|---|---|---|---|---|---|---|---|---|
| | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂಗಳಿಗೆ | ಒಟ್ಟು | 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | ಒಟ್ಟು | | | | |
| ಬೆವಿಕಂ | 44.00 | 0.00 | **44.00** | 1.38 | 3.07 | * **4.45** | * 2.50 | 50.95 | 0.00 | **50.95** |
| ಮವಿಕಂ | 30.00 | 0.00 | **30.00** | 1.25 | 0.50 | * **1.75** | * 1.00 | 32.75 | 0.00 | **32.75** |
| ಹುವಿಕಂ | 50.00 | 100.00 | **150.00** | 0.00 | 0.00 | **0.00** | 2.00 | 50.00 | 102.00 | **152.00** |
| ಗುವಿಕಂ | 60.00 | 20.00 | **80.00** | 3.77 | 1.31 | **5.08** | 0.50 | 60.00 | 25.58 | **85.58** |
| ಚಾವಿಸನಿನಿ | 46.00 | 20.00 | **66.00** | 2.60 | 1.13 | **3.73** | 2.88 | 46.00 | 26.61 | **72.61** |
| ಹು.ಗ್ರಾ.ಸ.ಸಂ | 0.00 | 5.00 | **5.00** | 0.00 | 1.00 | **1.00** | 0.00 | 0.00 | 6.00 | **6.00** |
| ಒಟ್ಟು | **230.00** | **145.00** | **375.00** | **9.00** | **7.01** | **16.01** | **8.88** | **239.70** | **160.19** | **399.89** |

* ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ ಹಾಗೂ ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಮೊತ್ತವನ್ನು ಈ ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

5. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 50.00 ಕೋಟಿಗಳಲ್ಲಿ ರೂ. 50.00 ಕೋಟಿಗಳನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಎನರ್ಜಿ ಬ್ಯಾಲೆನ್ಸಿಂಗ್ ಹೊಂದಾಣಿಕೆ (Energy Balancing Adjustment) ಮೊತ್ತಕ್ಕೆ ಸರಿಹೊಂದಿಸಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ವಿದ್ಯುತ್ ಖರೀದಿ ವೆಚ್ಚಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

6. ಹುಕ್ಕೇರಿ ಗ್ರಾಮೀಣ ಸಹಕಾರ ಸಂಘಕ್ಕೆ ಬಿಡುಗಡೆ ಮಾಡಿರುವ ಸಹಾಯಧನ ರೂ.6.00 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಖರೀದಿ ಮಾಡಿರುವ ವಿದ್ಯುತ್ ವೆಚ್ಚದ ಬಾಬ್ತು ಹೊಂದಾಣಿಕೆ ಮೂಲಕ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ.

7. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ.239.70 ಕೋಟಿಗಳನ್ನು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ರೂ.108.00 ಕೋಟಿಗಳನ್ನು, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ರೂ.25.58 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ರೂ.26.61 ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು, ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate)ಸಲ್ಲಿಸತಕ್ಕದ್ದು.

9. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

10. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು, ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

11. 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳನ್ನು ವಿಸಕಂಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮನ್ನಾ ಮಾಡಿರುವ ಮೊತ್ತದ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

12. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಎಫ್‌ಡಿ 996 ವೆಚ್ಚ–1/2015, ದಿನಾಂಕ: 28.07.2015ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 4 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09.10.2015ರಲ್ಲಿ, 2015–16ನೇ ಸಾಲಿನ ಮೂರನೇ ತ್ರೈಮಾಸಿಕಕ್ಕೆ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

PR. 200

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** **'ಅಪರ ಪೊಲೀಸ್ ಮಹಾನಿರ್ದೇಶಕರು, ಭ್ರಷ್ಟಾಚಾರ ನಿಗ್ರಹ ದಳ'** ಬೆಂಗಳೂರು ಇವರನ್ನು ಇಲಾಖಾ ಮುಖ್ಯಸ್ಥರೆಂದು (H.O.D.) ಘೋಷಿಸುವ ಕುರಿತು.

**ಓದಲಾಗಿದೆ:–**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 14 ಸೇಲೋಯ 2016, ದಿನಾಂಕ 14–03–2016.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 82 ಸೇಲೋಯ 2016, ದಿನಾಂಕ 27–04–2016.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 14–03–2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸುವ ಸಲುವಾಗಿ ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು ವಿವಿಧ ದರ್ಜೆಯ 322 ಹುದ್ದೆಗಳೊಂದಿಗೆ ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 27–04–2016ರ ಆದೇಶದಲ್ಲಿ ಹೊಸದಾಗಿ ಸೃಜಿಸಲಾಗಿರುವ ಭ್ರಷ್ಟಾಚಾರ ನಿಗ್ರಹ ದಳದ ಕಛೇರಿಯ ಅಧಿಕಾರಿ/ಸಿಬ್ಬಂದಿಗಳಿಗೆ ವೇತನ ಮತ್ತಿತರ ವೆಚ್ಚಗಳಿಗಾಗಿ ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 17ಸಿ, 49 ಮತ್ತು 50ರನ್ವಯ ಮಹಾಲೇಖಪಾಲರ ಅನುಮತಿ ಪತ್ರ (Authorisation) ಪಡೆಯುವ ಷರತ್ತಿನ ಮೇಲೆ **'ಅಪರ ಪೊಲೀಸ್ ಮಹಾ ನಿರ್ದೇಶಕರು, ಭ್ರಷ್ಟಾಚಾರ ನಿಗ್ರಹ ದಳ',** ಇವರನ್ನು 2016–17ರ ಪೂರಕ ಅಂದಾಜುಗಳು–1ನೇ ಕಂತು ಅನುಮೋದನೆಯಾಗುವವರೆಗೆ, ಕರ್ನಾಟಕ ಸರ್ಕಾರದ ಸಚಿವಾಲಯದ ಲೆಕ್ಕ ಶೀರ್ಷಿಕೆ 2052–00–090–0–01– Karnataka Government Secretariat ರಡಿಯಲ್ಲಿ ಹಾಗೂ 2016–17ನೇ ಪೂರಕ ಅಂದಾಜುಗಳು –1ನೇ ಕಂತು ಅನುಮೋದನೆಯಾದ ನಂತರ ಭ್ರಷ್ಟಾಚಾರ ನಿಗ್ರಹ ದಳಕ್ಕೆ ಅನುದಾನ ಒದಗಿಸಲಾದ ಲೆಕ್ಕ ಶೀರ್ಷಿಕೆ 2052–00–092–0–16–Anti Corruption Bureau ರಡಿಯಲ್ಲಿ ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಯನ್ನಾಗಿ (D.D.O.) ನೇಮಿಸಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 2 ಟಿಎಫ್‌ಪಿ 2010, ದಿನಾಂಕ 30–04–2010 ರಲ್ಲಿ ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರಗಳನ್ನು ಚಲಾಯಿಸುವ ಸಲುವಾಗಿ **'ಅಪರ ಪೊಲೀಸ್ ಮಹಾ ನಿರ್ದೇಶಕರು, ಭ್ರಷ್ಟಾಚಾರ ನಿಗ್ರಹ ದಳ',** ಇವರನ್ನು ಇಲಾಖಾ ಮುಖ್ಯಸ್ಥರೆಂದು ಘೋಷಿಸುವ ಅವಶ್ಯಕತೆ ಇರುವುದನ್ನು ಪರಿಗಣಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 82 ಸೇಲೋಯ 2016, ಬೆಂಗಳೂರು ದಿನಾಂಕ :04–05–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹೊಸದಾಗಿ ಸೃಜಿಸಿರುವ ಭ್ರಷ್ಟಾಚಾರ ನಿಗ್ರಹ ದಳಕ್ಕೆ ಪ್ರತ್ಯೇಕ ಲೆಕ್ಕ ಶೀರ್ಷಿಕೆ 2052–00–092–0–16–Anti Corruption Bureau ನ್ನು ನೀಡಲಾಗಿದ್ದು, ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಟಿಎಫ್‌ಪಿ 2010, ದಿನಾಂಕ 30–04–2010 ರಲ್ಲಿ ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರಗಳನ್ನು ಚಲಾಯಿಸುವ ಸಲುವಾಗಿ **'ಅಪರ ಪೊಲೀಸ್ ಮಹಾ ನಿರ್ದೇಶಕರು, ಭ್ರಷ್ಟಾಚಾರ ನಿಗ್ರಹ ದಳ',** ಇವರನ್ನು ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 8(21) ರನ್ವಯ ಇಲಾಖಾ ಮುಖ್ಯಸ್ಥರೆಂದು ಘೋಷಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ : 131 : ಆನಿ : 2016, ದಿನಾಂಕ 30–04–2016 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾ ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–2)

**P.R. 396**
**S.C. 200**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಭ್ರಷ್ಟಾಚಾರ ನಿಗ್ರಹ ದಳಕ್ಕೆ ಖನಿಜ ಭವನದಲ್ಲಿ ಸ್ಥಳಾವಕಾಶ ಒದಗಿಸಿರುವ ಸಂಬಂಧ ಷರತ್ತು ಮತ್ತು ನಿಬಂಧನೆಗಳ ಬಗ್ಗೆ

**ಓದಲಾಗಿದೆ:–**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 14 ಸೇಲೋಯ 2016, ದಿನಾಂಕ 14.03.2016.
2) ಸರ್ಕಾರದ ಪತ್ರ ಸಂಖ್ಯೆ:ಸಿಆಸುಇ 14 ಸೇಲೋಯ 2016 (ಭಾಗ–1), ದಿನಾಂಕ:13.04.2016.
3) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೈಗಾರಿಕಾ ಮತ್ತು ಮೂಲಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಕೆಬಿ/ಎಂ/131/2016–17, ದಿನಾಂಕ 20.04.2016.
4) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 82 ಸೇಲೋಯ 2016, ದಿನಾಂಕ 27.04.2016.
5) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 82 ಸೇಲೋಯ 2016, ದಿನಾಂಕ 04.05.2016.

**ಪ್ರಸ್ತಾವನೆ:**

ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಜಾರಿಗೊಳಿಸಲು ಹಾಗೂ ಪ್ರಕರಣಗಳನ್ನು ಸ್ವತಂತ್ರವಾಗಿ ತನಿಖೆ ಮಾಡಲು 322 ವಿವಿಧ ಹುದ್ದೆಗಳೊಂದಿಗೆ ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಸೃಜಿಸಲಾಗಿದೆ.

ಭ್ರಷ್ಟಾಚಾರ ನಿಗ್ರಹ ದಳದ ಕೇಂದ್ರ ಕಛೇರಿಯನ್ನು ಬೆಂಗಳೂರಿನ ರೇಸ್‌ಕೋರ್ಸ್ ರಸ್ತೆಯಲ್ಲಿರುವ ಖನಿಜ ಭವನದಲ್ಲಿ ಸ್ಥಾಪಿಸುವ ಸಲುವಾಗಿ ಸ್ಥಳಾವಕಾಶದ ವಿಸ್ತೀರ್ಣ ಮತ್ತು ಅದಕ್ಕೆ ಭರಿಸಬೇಕಾದ ಬಾಡಿಗೆ ದರ ಇತ್ಯಾದಿಗಳ ವಿವರಗಳನ್ನು ಒದಗಿಸುವಂತೆ ಮೇಲೆ ಕ್ರಮ ಸಂಖ್ಯೆ:(2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೈಗಾರಿಕಾ ಮತ್ತು ಮೂಲಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರನ್ನು ಕೋರಲಾಗಿತ್ತು.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೈಗಾರಿಕಾ ಮತ್ತು ಮೂಲಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರು ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ಪತ್ರದಲ್ಲಿ ಭ್ರಷ್ಟಾಚಾರ ನಿಗ್ರಹ ದಳದ ಕೇಂದ್ರ ಕಛೇರಿಗಾಗಿ ಖನಿಜ ಭವನದಲ್ಲಿ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ, ಸ್ಥಳಾವಕಾಶವನ್ನು ಹಂಚಿಕೆ ಮಾಡುವುದಾಗಿ ತಿಳಿಸಿರುತ್ತಾರೆ:–

(ಎ) ಮೇಲೆ ತಿಳಿಸಿದ ಸ್ಥಳಾವಕಾಶಕ್ಕೆ ಬಾಡಿಗೆಯನ್ನು ಪ್ರತಿ ಚದರಡಿಗೆ ₹114.75ರಂತೆ ನಿಗಧಿಪಡಿಸಲಾಗಿದೆ. (ಈ ಹಿಂದಿನ ಬಾಡಿಗೆದಾರರು ತಾವು ತೆರವುಗೊಳಿಸುವ ಸಮಯದಲ್ಲಿ ನೀಡುತ್ತಿದ್ದ ದರ)

(ಬಿ) ಈ ಬಾಡಿಗೆಯು ನಾಲ್ಕು ಚಕ್ರದ 10 ವಾಹನಗಳು ಮತ್ತು ಎರಡು ಚಕ್ರದ 20 ವಾಹನಗಳ ನಿಲುಗಡೆಗಾಗಿ ಬೇಸ್‌ಮೆಂಟ್ ಮತ್ತು/ಅಥವಾ ತೆರೆದ ಜಾಗದಲ್ಲಿ ಒದಗಿಸಿರುವ ನಿಲುಗಡೆ ಜಾಗವನ್ನೂ ಒಳಗೊಂಡಿರುತ್ತದೆ.

(ಸಿ) ಗುತ್ತಿಗೆ ಅವಧಿಯು ಕನಿಷ್ಠ 3 ವರ್ಷ ಅವಧಿಯಾಗಿದ್ದು, ಪರಸ್ಪರ ಒಪ್ಪಿಗೆ ಇದ್ದಲ್ಲಿ ನವೀಕರಿಸುವ ಆಯ್ಕೆಗೊಳಪಟ್ಟಿರುತ್ತದೆ. ಆದರೆ, ಮೊದಲು ಮೂರು ವರ್ಷಗಳ ಅವಧಿಯು ಲಾಕ್–ಇನ್–ಪಿರಿಯಡ್ ಆಗಿರುತ್ತದೆ.

(ಡಿ) ಸಿ.ಆ.ಸು.ಇಲಾಖೆಯು 10 ತಿಂಗಳ ಬಾಡಿಗೆಗೆ ಸಮನಾದ ₹1,65,74,490/–ನ್ನು (ಅಂದರೆ 14444x114.75x10) ಭದ್ರತಾ ಠೇವಣಿ (ಬಡ್ಡಿ ರಹಿತ)ಯನ್ನು ಪಾವತಿಸತಕ್ಕದ್ದು. ಸದರಿ ಮೊತ್ತವನ್ನು ಗುತ್ತಿಗೆ ಅವಧಿ ಮುಕ್ತಾಯವಾದ ನಂತರ ಹಿಂತಿರುಗಿಸಲಾಗುವುದು.

(ಇ) ಮೇಲಿನ ಭದ್ರತಾ ಠೇವಣಿಯ ಜೊತೆಗೆ ಹೆಚ್ಚುವರಿಯಾಗಿ, ಸಿ.ಆ.ಸು.ಇಲಾಖೆಯು ₹4,50,000/–ಗಳನ್ನು (for 150 KVA @ ₹3000/- per KVA) ಬ್ಯಾಕ್–ಅಪ್ ಪವರ್ ಡಿಪಾಸಿಟ್ ಆಗಿ ಇಡಬೇಕು.

(ಎಫ್) ಸಿ.ಆ.ಸು.ಇಲಾಖೆಯು ಸ್ಥಳಾವಕಾಶವನ್ನು ಸುಪರ್ದಿಗೆ ಪಡೆಯುವ ಮುನ್ನ ಔಪಚಾರಿಕ ಗುತ್ತಿಗೆ ಒಪ್ಪಂದಕ್ಕೆ ಒಳಪಡಬೇಕು. (ಕೆಎಸ್‌ಐಐಡಿಸಿಯ ನಮೂನೆಯಂತೆ)

(ಜಿ) ಗುತ್ತಿಗೆ ಕರಾರಿಗೆ ಸಂಬಂಧಿಸಿದಂತೆ ಸ್ಟಾಂಪ್ ಮತ್ತು ನೋಂದಣಿ ವೆಚ್ಚಗಳೇನಾದರೂ ಇದ್ದಲ್ಲಿ, ಗೇಣಿದಾರನಾಗಿ (as Lessee) ಸಿ.ಆ.ಸು. ಇಲಾಖೆಯೇ ವೆಚ್ಚ ಭರಿಸತಕ್ಕದ್ದು. ಗುತ್ತಿಗೆಗೆ ಅನುಗುಣವಾಗಿ ತಯಾರಿ/ಕಾನೂನು ವಿಮರ್ಶೆ/ಇತರ ವೆಚ್ಚಗಳೇನಾದರೂ ಇದ್ದಲ್ಲಿ ಸಿ.ಆ.ಸು. ಇಲಾಖೆಯೇ ಭರಿಸತಕ್ಕದ್ದು.

(ಹೆಚ್) ಸದರಿ ಕಟ್ಟಡವನ್ನು **"ಎಲ್ಲಿ ಹೇಗಿದೆಯೋ ಹಾಗೆ "** ಆಧಾರದ ಮೇಲೆ ಗುತ್ತಿಗೆ ನೀಡಲಾಗುತ್ತದೆ.

(ಐ) ಹಂಚಿಕೆಯಾದ ಕಟ್ಟಡದಲ್ಲಿ ಯಾವುದೇ ರೀತಿಯ ಉಪಬಾಡಿಗೆ/ಹಂಚಿಕೆ ಮಾಡಿಕೊಳ್ಳಬಾರದು.

(ಜೆ) ಆರಂಭಿಕ ಮೂರು ವರ್ಷಗಳ ಲಾಕ್–ಇನ್–ಅವಧಿಯ ನಂತರ ಇಬ್ಬರಲ್ಲಿ ಯಾರಾದರೂ ಇಚ್ಛಿಸಿದಲ್ಲಿ ಮೂರು ತಿಂಗಳ ಪೂರ್ವ ನೋಟಿಸ್ ನೀಡಿ ಗುತ್ತಿಗೆ ಮುಕ್ತಾಯಗೊಳಿಸಬಹುದು.

(ಕೆ) ಸಾಮಾನ್ಯ ಪ್ಯಾಸೇಜ್‌ಗಳು, ಲ್ಯಾಂಡಿಂಗ್ ಏರಿಯಾ ಮತ್ತು ಮೆಟ್ಟಿಲುಗಳು ಎಲ್ಲರ ಸಾಮಾನ್ಯ ಬಳಕೆಗೆ ಲಭ್ಯವಿರುತ್ತದೆ. ಸಾಮಾನ್ಯ ಸೇವೆಗಳ ನಿರ್ವಹಣಾ ವೆಚ್ಚ ಮತ್ತು ದುರಸ್ಥಿಗಾಗಿ ಅಂದರೆ ಸಾಮಾನ್ಯ ಬಳಕೆಯ ಜಾಗದ ಸ್ವಚ್ಛತೆ/ದುರಸ್ಥಿ ವೆಚ್ಚ, ನೀರಿನ ವೆಚ್ಚ, ಪವರ್ ಬ್ಯಾಕ್–ಅಪ್ ವೆಚ್ಚವನ್ನು ಸ್ಥಳಾವಕಾಶಕ್ಕೆ ಅನುಗುಣವಾಗಿ ಹಂಚಿಕೆ ಮಾಡಲಾಗುವುದು ಮತ್ತು ಇದನ್ನು ಕೆಎಸ್‌ಐಐಡಿಸಿಯ ಪ್ರಾಪರ್ಟಿ ಮ್ಯಾನೇಜರ್ ಅಂತಿಮಗೊಳಿಸುತ್ತಾರೆ.

(ಎಲ್) ಸಿ.ಆ.ಸು.ಇಲಾಖೆಯು ವಿದ್ಯುತ್ ವೆಚ್ಚವನ್ನು ಬಳಕೆಗೆ ಅನುಗುಣವಾಗಿ (actual usage) ಪ್ರತ್ಯೇಕವಾಗಿ ಭರಿಸತಕ್ಕದ್ದು.

(ಎಂ) ಕೆಎಸ್‌ಐಐಡಿಸಿಯು ಯಾವುದೇ ಆಂತರಿಕ ನಿರ್ವಹಣೆಯನ್ನು ಕೈಗೊಳ್ಳುವುದಿಲ್ಲ.

(ಎನ್) ಯಾವುದೇ ಪೀಠೋಪಕರಣ/ಫಿಕ್ಚರ್‌ಗಳನ್ನು ಕೆಎಸ್‌ಐಐಡಿಸಿಯು ಒದಗಿಸುವುದಿಲ್ಲ. ರಾಜೀವ್ ಗಾಂಧಿ ರೂರಲ್ ಹೌಸಿಂಗ್ ಕಾರ್ಪೋರೇಷನ್ ಲಿಮಿಟೆಡ್ (RGRHCL) ಸಂಸ್ಥೆಯು ಹಸ್ತಾಂತರಿಸಿರುವ ಸ್ಥಳದಲ್ಲಿ ಇರುವ fit-outs ಗಳನ್ನು ಖರೀದಿಸುವ ವಿಷಯವನ್ನು ಸಿ.ಆ.ಸು.ಇಲಾಖೆ/ಎಸಿಬಿಯು ನೇರವಾಗಿ ಪರಿಹರಿಸಿಕೊಳ್ಳಬಹುದು.

ಹಾಗೂ ಪ್ರಾರಂಭಿಕವಾಗಿ 10 ತಿಂಗಳ ಬಾಡಿಗೆಗೆ ಸಮನಾದ ಭದ್ರತಾ ಠೇವಣಿ(ಬಡ್ಡಿ ರಹಿತ) ಮತ್ತು ಬ್ಯಾಕ್–ಅಪ್ ಪವರ್ ಡಿಪಾಸಿಟ್ ಸೇರಿದಂತೆ ಒಟ್ಟು ಮೊತ್ತ ₹1,70,24,490/–ಗಳನ್ನು ಆದಷ್ಟು ಬೇಗ ಠೇವಣಿಯಿಡಲು ಅಗತ್ಯ ಕ್ರಮಕೈಗೊಳ್ಳುವಂತೆಯೂ ಸಹ ಕೋರಿರುತ್ತಾರೆ.

ಹೊಸದಾಗಿ ಸೃಜಿಸಿರುವ ಭ್ರಷ್ಟಾಚಾರ ನಿಗ್ರಹ ದಳಕ್ಕೆ ಪ್ರತ್ಯೇಕ ಲೆಕ್ಕ ಶೀರ್ಷಿಕೆ 2052–00–092–0–16–Anti Corruption Bureauನ್ನು ಒದಗಿಸಲಾಗಿದ್ದು, ಅಪರ ಪೊಲೀಸ್ ಮಹಾನಿರ್ದೇಶಕರು, ಭ್ರಷ್ಟಾಚಾರ ನಿಗ್ರಹ ದಳ, ಇವರನ್ನು ಭ್ರಷ್ಟಾಚಾರ ನಿಗ್ರಹ ದಳದ ಕಛೇರಿಯ ಅಧಿಕಾರಿ/ಸಿಬ್ಬಂದಿಗಳ ವೇತನ ಮತ್ತು ಇತರ ವೆಚ್ಚಗಳನ್ನು ಸೆಳೆಯಲು ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಯನ್ನಾಗಿ (D.D.O)

ಕ್ರ.ಸಂ.(4)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ನೇಮಿಸಲಾಗಿದೆ. ಹಾಗೂ ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 2 ಟಿಎಫ್‌ಪಿ 2010, ದಿ:30.04.2010ರಲ್ಲಿ ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರಗಳನ್ನು ಚಲಾಯಿಸುವ ಸಲುವಾಗಿ ಇವರನ್ನು ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 8(21)ರನ್ವಯ ಇಲಾಖಾ ಮುಖ್ಯಸ್ಥರೆಂದು ಮೇಲೆ ಕ್ರ.ಸಂ.(5)ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ ಘೋಷಿಸಲಾಗಿದೆ.

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಭ್ರಷ್ಟಾಚಾರ ನಿಗ್ರಹ ದಳಕ್ಕೆ ಪ್ರತ್ಯೇಕ ಲೆಕ್ಕ ಶೀರ್ಷಿಕೆ ನೀಡಿ, ಅಪರ ಪೊಲೀಸ್ ಮಹಾನಿರ್ದೇಶಕರು, ಇಲಾಖಾ ಮುಖ್ಯಸ್ಥರೆಂದು ಘೋಷಿಸಿರುವ ಹಿನ್ನೆಲೆಯಲ್ಲಿ, ಖನಿಜ ಭವನದಲ್ಲಿ ಭ್ರಷ್ಟಾಚಾರ ನಿಗ್ರಹ ದಳಕ್ಕೆ ಹಂಚಿಕೆಯಾಗಿರುವ ಸ್ಥಳಾವಕಾಶದ ಸಂಬಂಧ ಕೆ.ಎಸ್.ಐ.ಐ.ಡಿ.ಸಿ.ಯೊಂದಿಗೆ ಬಾಡಿಗೆ ಕರಾರು ಒಪ್ಪಂದವನ್ನು ಮಾಡಿಕೊಳ್ಳಲು ಅಪರ ಪೊಲೀಸ್ ಮಹಾನಿರ್ದೇಶಕರು, ಭ್ರಷ್ಟಾಚಾರ ನಿಗ್ರಹ ದಳ, ಇವರಿಗೆ ಅಧಿಕಾರ/ಅನುಮತಿ ನೀಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 114 ಸೇಲೋಯು 2016, ಬೆಂಗಳೂರು, ದಿನಾಂಕ:12.05.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಭ್ರಷ್ಟಾಚಾರ ನಿಗ್ರಹ ದಳದ ಕೇಂದ್ರ ಕಛೇರಿಯ ಸ್ಥಾಪನೆಗಾಗಿ ಬೆಂಗಳೂರಿನ ರೇಸ್‌ಕೋರ್ಸ್ ರಸ್ತೆಯಲ್ಲಿರುವ ಖನಿಜ ಭವನದಲ್ಲಿ ಹಂಚಿಕೆಯಾಗಿರುವ ಸ್ಥಳಾವಕಾಶಕ್ಕೆ ಸಂಬಂಧಿಸಿದಂತೆ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೈಗಾರಿಕಾ ಮತ್ತು ಮೂಲಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರೊಂದಿಗೆ ಬಾಡಿಗೆ ಕರಾರು ಒಪ್ಪಂದ ಮಾಡಿಕೊಳ್ಳಲು ಅಪರ ಪೊಲೀಸ್ ಮಹಾನಿರ್ದೇಶಕರು, ಭ್ರಷ್ಟಾಚಾರ ನಿಗ್ರಹ ದಳ, ಇವರಿಗೆ ಸರ್ಕಾರವು ಅಧಿಕಾರ/ಅನುಮತಿ ನೀಡಿದೆ.

ಈ ಒಪ್ಪಂದಕ್ಕಾಗಿ ಪ್ರಾರಂಭಿಕವಾಗಿ ಭದ್ರತಾ ಠೇವಣಿ(ಬಡ್ಡಿ ರಹಿತ)ಗಳಾದ ₹1,65,74,490/– (ಒಂದು ಕೋಟಿ ಅರವತ್ತೈದು ಲಕ್ಷದ ಎಪ್ಪತ್ತನಾಲ್ಕು ಸಾವಿರದ ನಾಲ್ಕುನೂರ ತೊಂಭತ್ತು ರೂಪಾಯಿಗಳು ಮಾತ್ರ) ಮತ್ತು ಬ್ಯಾಕ್–ಅಪ್ ಪವರ್ ಡಿಪಾಸಿಟ್‌ಗಾಗಿ ₹4,50,000/– (ನಾಲ್ಕು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಒಟ್ಟು ₹1,70,24,490/– (ಒಂದು ಕೋಟಿ ಎಪ್ಪತ್ತು ಲಕ್ಷದ ಇಪ್ಪತ್ತನಾಲ್ಕು ಸಾವಿರದ ನಾಲ್ಕುನೂರ ತೊಂಭತ್ತು ರೂಪಾಯಿಗಳು ಮಾತ್ರ) ಠೇವಣಿಯಿಡಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಕಡತ ಸಂಖ್ಯೆ:ಸಿಆಸುಇ 114 ಸೇಲೋಯು, 2016ರ ಕಂಡಿಕೆ 11ರಲ್ಲಿ ಆರ್ಥಿಕ ಇಲಾಖೆಯು ದಿ:05.05.2016ರಂದು ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾ ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–2)

**P.R. 397**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಹೊಸದಾಗಿ ಸೃಜನೆಗೊಂಡಿರುವ ಭ್ರಷ್ಟಾಚಾರ ನಿಗ್ರಹ ದಳದ ಪೊಲೀಸ್ ಠಾಣೆಗಳಿಗೆ ಸಿಂಟ್ರೆಕ್ಸ್ ಮತ್ತು ನೇರ ಸ್ಥಿರ ದೂರವಾಣಿ ಸಂಪರ್ಕ ಸೇವೆಯನ್ನು ಮಂಜೂರು ಮಾಡುವ ಬಗ್ಗೆ..

**ಓದಲಾಗಿದೆ:–**
1) ಸರ್ಕಾರದ ಆದೇಶ ಸಂಖ್ಯೆ.ಸಿಆಸುಇ 14 ಸೇಲೋಯು 2016, ದಿನಾಂಕ 14.03.2016.
2) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ, ಇವರ ಪತ್ರ ಸಂಖ್ಯೆ.ಆರ್.ಎಲ್.ಎನ್(1)87/2015–16, ದಿನಾಂಕ:06.04.2016.

**ಪ್ರಸ್ತಾವನೆ:**

ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಜಾರಿಗೊಳಿಸಲು ಹಾಗೂ ಪ್ರಕರಣಗಳನ್ನು ಸ್ವತಂತ್ರವಾಗಿ ತನಿಖೆ ಮಾಡಲು 322 ವಿವಿಧ ಹುದ್ದೆಗಳೊಂದಿಗೆ ರಾಜ್ಯದಲ್ಲಿ ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಸೃಜಿಸಲಾಗಿದೆ.

ಭ್ರಷ್ಟಾಚಾರ ನಿಗ್ರಹ ದಳದಲ್ಲಿ ಕರ್ತವ್ಯ ನಿರ್ವಹಿಸಲು ನಿಯೋಜಿಸಲಾಗಿರುವ ಅಧಿಕಾರಿಗಳಿಗೆ ಸತತವಾಗಿ ಮೇಲಾಧಿಕಾರಿಗಳೊಂದಿಗೆ ಸಂಪರ್ಕದಲ್ಲಿರಲು ಹಾಗೂ ಮಾಹಿತಿ ವಿನಿಮಯಕ್ಕೆ ಅಗತ್ಯವಾಗಿ ಭ್ರಷ್ಟಾಚಾರ ನಿಗ್ರಹ ದಳದ ಕೇಂದ್ರ ಕಛೇರಿ, ಎಸ್.ಪಿ.ಕಛೇರಿಗಳು ಮತ್ತು ಎಲ್ಲಾ ಪೊಲೀಸ್ ಠಾಣೆಗಳಿಗೆ ಈ ಕೆಳಕಂಡಂತೆ ಸ್ಥಿರ ದೂರವಾಣಿ ಸಂಪರ್ಕವನ್ನು ಒದಗಿಸುವಂತೆ ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು ರವರು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ:

| ಕ್ರ. | ಕಛೇರಿ /ಪೊಲೀಸ್ | ಅಗತ್ಯವಿರುವ ಸಂಪರ್ಕ ದೂರವಾಣಿ | |
|---|---|---|---|
| ಸಂ. | ಠಾಣೆ | ಸಿಂಟ್ರೆಕ್ಸ್ | ನೇರ ಸ್ಥಿರ ದೂರವಾಣಿ |
| 1. | ಎ.ಸಿ.ಬಿ. ಕೇಂದ್ರ ಕಛೇರಿ | 8 | 8 |
| 2. | ವಲಯ ಎಸ್.ಪಿ. ಕಛೇರಿ | 7 | 7 |
| 3. | ಎಸಿಬಿ ಪೊಲೀಸ್ ಠಾಣೆಗಳು | 30 | 30 |
| | **ಒಟ್ಟು** | **45** | **45** |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 95 ಸೇಲೋಯ 2016 ಬೆಂಗಳೂರು, ದಿನಾಂಕ: 12.5.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹೊಸದಾಗಿ ಸೃಜನೆಗೊಂಡಿರುವ 'ಭ್ರಷ್ಟಾಚಾರ ನಿಗ್ರಹ ದಳಕ್ಕೆ' ಈ ಕೆಳಕಂಡಂತೆ ಸಿಂಟ್ರೆಕ್ಸ್ ಮತ್ತು ನೇರ ಸ್ಥಿರ ದೂರವಾಣಿ ಸಂಪರ್ಕವನ್ನು ಹಾಲಿ ಜಾರಿಯಲ್ಲಿರುವ KTPP ಕಾಯ್ದೆ ಹಾಗೂ ನಿಯಮಗಳನುಸಾರ ಪಡೆಯಲು ಮಂಜೂರಾತಿ ನೀಡಲಾಗಿದೆ:–

| ಕ್ರ. ಸಂ. | ಕಛೇರಿ/ಪೊಲೀಸ್ ಠಾಣೆ | ಅಗತ್ಯವಿರುವ ಸಂಪರ್ಕ ದೂರವಾಣಿ | |
|---|---|---|---|
| | | ಸಿಂಟ್ರೆಕ್ಸ್ | ನೇರ ಸ್ಥಿರ ದೂರವಾಣಿ |
| 1. | ಎ.ಸಿ.ಬಿ. ಕೇಂದ್ರ ಕಛೇರಿ | 8 | 8 |
| 2. | ವಲಯ ಎಸ್.ಪಿ. ಕಛೇರಿ | 7 | 7 |
| 3. | ಎ.ಸಿ.ಬಿ. ಪೊಲೀಸ್ ಠಾಣೆಗಳು | 30 | 30 |
| | **ಒಟ್ಟು** | **45** | **45** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 325 ವೆಚ್ಚ–12/2016, ದಿನಾಂಕ: 29.04.2016ರಂದು ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾ ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–2)

**P.R. 398**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59